# ಶ್ರೀಕೃಷ್ಣ ಪಾರಿಜಾತದ

# ಕೊರವಂಜಿ

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು

ಶ್ರೀ ಎಸ್. ಪಿ. ಮುದ್ರೇಕರ

ವಾಣಿಜ್ಯ ಬಿ.ಎಚ್.ಎಸ್. ಕಲೆ ಮತ್ತು ಟಿ.ಜಿ.ಪಿ.
ವಿಜ್ಞಾನ ಮಹಾವಿದ್ಯಾಲಯ,
ಜಮಖಂಡಿ. ಜಿ|| ಬಾಗಲಕೋಟ

ನೋಂದಣಿ ಸಂಖ್ಯೆ: ಬಿ.ಆರ್.ಡಿ.ಎಸ್/ಕೆ೦೦೮

ಮಾರ್ಗದರ್ಶಕರು

ಡಾ. ವ್ಹಿ. ಎಸ್. ಮಾಳಿ

ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ,
ಹಾರೂಗೇರಿ ಜಿ. ಬೆಳಗಾವಿ

ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,
ಹಾರೂಗೇರಿ ಜಿ. ಬೆಳಗಾವಿ

ಮಾನ್ಯತೆ : ಕನ್ನಡ ನಿಶ್ವವಿದ್ಯಾಲಯ, ಹಂಪಿ

೨೦೧೧

# ಶ್ರೀಕೃಷ್ಣ ಪಾರಿಜಾತದ ಕೊರವಂಜಿ

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು

**ಶ್ರೀ ಎಸ್. ಸಿ. ಮುದ್ರೇಕರ**

ವಾಣಿಜ್ಯ ಬಿ.ಎಚ್.ಎಸ್. ಕಲೆ ಮತ್ತು ಟಿ.ಜಿ.ಪಿ.
ವಿಜ್ಞಾನ ಮಹಾವಿದ್ಯಾಲಯ,
ಜಮಖಂಡಿ. ಜಿ॥ ಬಾಗಲಕೋಟ

ಮಾರ್ಗದರ್ಶಕರು

**ಡಾ. ವ್ಹಿ. ಎಸ್. ಮಾಳಿ**

ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ,,
ಹಾರೂಗೇರಿ ಜಿ. ಬೆಳಗಾವಿ



**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೧

# ಪ್ರಮಾಣ ಪತ್ರ

**ಶ್ರೀಕೃಷ್ಣ ಪಾರಿಜಾತದ ಕೊರವಂಜಿ** ಎಂಬ ಶೀರ್ಷಿಕೆಯ ನಿಬಂಧವನ್ನು **ಡಾ. ವ್ಹಿ. ಎಸ್. ಮಾಳಿ** ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೧೦-೦೬-೨೦೧೧

**ಶ್ರೀ ಎಸ್. ಪಿ. ಮುದ್ರೇಕರ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ

# ಧೃಢೀಕರಣ ಪತ್ರ

**ಶ್ರೀ ಎಸ್. ಪಿ. ಮದ್ರೇಕರ** ಇವರು **ಶ್ರೀಕೃಷ್ಣ ಪಾರಿಜಾತದ ಕೊರವಂಜಿ** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.



ಸ್ಥಳ : ಹಾರೂಗೇರಿ
ದಿನಾಂಕ : ೧೦-೦೬-೨೦೧೧

**ಡಾ. ವ್ಹಿ. ಎಸ್. ಮಾಳಿ**
ಮಾರ್ಗದರ್ಶಕರು,
ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ

# • ಪರಿವಿಡಿ •

# ಅರಿಕೆ

ನಾನು ಜಮಖಂಡಿಯ ವಾಣಿಜ್ಯ ಬಿ.ಎಚ್.ಎಸ್. ಕಲೆ ಮತ್ತು ಟಿ.ಜಿ.ಪಿ. ವಿಜ್ಞಾನ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕನಾಗಿ ಸೇವೆ ಸಲ್ಲಿಸುತ್ತಿದ್ದು, ಸಂಶೋಧನೆಯಲ್ಲಿ ತೊಡಗಬೇಕೆಂಬ ಹಂಬಲ ನನ್ನಲ್ಲಿ ಇರಲಿಲ್ಲಾ. ಯಾಕೋ ಏನೋ ಆಕಸ್ಮೀಕವಾಗಿ ನನ್ನ ನೆಚ್ಚಿನ ಪ್ರಾಧ್ಯಾಪಕರಾದ ಡಾ॥ ವ್ಹಿ. ಎಸ್. ಮಾಳಿ ಸರ್‌ರವರು ಒಂದು ದಿವಸ ನಮ್ಮ ಮಹಾವಿದ್ಯಾಲಯಕ್ಕೆ ಬಂದು ನಮ್ಮ ಹಾರೂಗೇರಿಯ ಮಹಾವಿದ್ಯಾಲಯದಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಸಂಶೋಧನಾ ಕೇಂದ್ರದಲ್ಲಿ ಎಂ.ಫಿಲ್. ಮಾಡಿರಿ ಮತ್ತು ಜಮಖಂಡಿಯ ಸುತ್ತಲೂ ಇರುವ ಜನಪದ ಬಯಲಾಟ ಕಲಾವಿದರು ಹಾಗೂ ಸಾಕಷ್ಟು ಸಾಹಿತ್ಯ ಸಂಪತ್ತು ಇದೆ. ಅದನ್ನು ಸಂಶೋಧಿಸಿ, ಸಂಗ್ರಹಿಸಿರಿ ಎಂಬ ಸಲಹೆ - ಸೂಚನೆಗಳ ಮಾರ್ಗದರ್ಶನ ಕೊಟ್ಟರು. ಆ ದಿವಸ ನನಗೆ ಎಂದು ಹೊಳೆಯದ ವಿಚಾರ ಅಂದು ನನ್ನನ್ನು ಸಂಶೋಧನಾ ವಲಯಕ್ಕೆ ತಿರುಗುವಂತೆ ಮಾಡಿತು. ಅವರ ಮಾರ್ಗದರ್ಶನದಂತೆ ನಾನು ಎಂ.ಫಿಲ್ ಪ್ರವೇಶವನ್ನು ಪಡೆದು ಸಂಬಂಧ ಪಟ್ಟ ವಿಷಯಗಳ ಮಾಹಿತಿಯನ್ನು ತಿಳಿದುಕೊಂಡು ಬಂದೆ. ಆಗ ನನ್ನಲ್ಲಿ ಕುತುಹಲ ಕೆರಳಿಸಿತು. ಅಂದಿನಿಂದ ಸಾಯಂಕಾಲದ ತರಗತಿಗಳಿಗೆ ಹಾಜರಾಗತೊಡಗಿದೆ. ನನಗೆ ಕಷ್ಟವೆನಿಸಿದರು ನಿಭಾಯಿಸಿದೆ. ನನಗೆ ಪ್ರತಿಯೊಂದು ವಿಷಯವನ್ನು ಮಾರ್ಗದರ್ಶನ ಮತ್ತು ಸಹಾಯ-ಸಹಕಾರ ನೀಡಿದ ಡಾ॥ ವ್ಹಿ. ಎಸ್. ಮಾಳಿಯವರಿಗೆ ಕೃತಜ್ಞತೆಗಳು. ಡಾ॥ ಶ್ರೀರಾಮ ಇಟ್ಟಣ್ಣವರ, ಡಾ॥ ಸಂಗಮೇಶ ಬಿರಾದಾರ ಇವರೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

ನಮ್ಮ ಬಿ.ಎಲ್.ಡಿ.ಇ. ಸಂಸ್ಥೆಯ ವಿದ್ಯಾ ಪ್ರೇಮಿಗಳು ಹಾಗೂ ದಕ್ಷ ಆಡಳಿತಾಧಿಕಾರಿಗಳು ಆದ ಪ್ರೋ. ಎಚ್. ಎಸ್. ಲಗಳಿ ಸರ್ ಅವರಿಗೂ ಹಾಗೂ ನಮ್ಮ ಮಹಾವಿದ್ಯಾಲಯದ ಆದರಣಿಯ ಪ್ರಾಚಾರ್ಯರಾದ ಡಾ॥ ಎಸ್. ಎಸ್. ಸುವರ್ಣಖಂಡಿಯವರಿಗೂ ನಮ್ಮ ಕನ್ನಡ ವಿಭಾಗದ ಎಲ್ಲ ಪ್ರಾಧ್ಯಾಪಕರೆಲ್ಲರಿಗೂ ಮತ್ತು ಗ್ರಂಥಪಾಲಕರಿಗೂ ಹಾಗೂ ನಮ್ಮ ವಿದ್ಯಾಲಯದ ಎಲ್ಲ ಸಿಬ್ಬಂದಿ ವರ್ಗದವರೆಲ್ಲರಿಗೂ, ಪ್ರತ್ಯಕ್ಷ - ಅಪ್ರತ್ಯಕ್ಷ ಸಹಾಯ - ಸಹಕಾರ ನೀಡಿದ ನನ್ನ ಕುಟುಂಬದ ಸದಸ್ಯರಿಗೂ ಇನ್ನೂಳಿದ ಸ್ನೇಹಿತರಿಗೂ ನಾನು ನೆನೆಯದೆ ಇರಲಾರೆ.

ವೃಷಭೇಂದ್ರ ಕಾಲೇಜಿನ ಸಿಬ್ಬಂದಿ ವರ್ಗದವರಿಗೆ ವಂದನೆಗಳು. ಸಂಶೋಧನಾ ಕೇಂದ್ರದ ರೂವಾರಿಯಾದ ಶ್ರೀ ಬಿ. ಆರ್. ದರೂರ ಅವರನ್ನು ಸದಾಕಾಲವು ಸ್ಮರಿಸುವೆನು. ಅದರಂತೆ ಪ್ರಬಂಧವನ್ನು ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿದ ನಮ್ಮ ಕಾಲೇಜಿನ ಹಳೆ ವಿದ್ಯಾರ್ಥಿಯಾದ ಮುರಗೇಶ ಕೌಲಾಪುರ ಅವರಿಗೆ ವಂದನೆಗಳು.

ದಿ : ೧೦-೦೬-೨೦೧೧

**ಶ್ರೀ ಎಸ್. ಪಿ. ಮದ್ರೇಕರ**
**ವಾಣಿಜ್ಯ ಬಿ.ಎಚ್.ಎಸ್. ಕಲೆ ಮತ್ತು ಟಿ.ಜಿ.ಪಿ.**
**ವಿಜ್ಞಾನ ಮಹಾವಿದ್ಯಾಲಯ, ಜಮಖಂಡಿ.**
**ಜಿ॥ ಬಾಗಲಕೋಟ**

## ಅಧ್ಯಾಯ – ೧

# ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

ಮಾನವನು ಹುಟ್ಟಿದಾಗಲೇ ಮಾತು ಕಲಿತವನಲ್ಲ. ಮಾತು ಕಲಿತದ್ದು ಎಷ್ಟೋ ವರ್ಷಗಳ ನಂತರ. ಆತನ ಕೂಗು, ಸನ್ನೆ, ಸಂಕೇತ, ಮುಖಮುದ್ರೆ, ಹಾವಭಾವಗಳ ಮೂಲಕ ತನ್ನ ಅಂತರಂಗದ ಅಭಿವ್ಯಕ್ತಿಯನ್ನು ತನಗೆ ಸಂತೋಷವಾದಾಗ ಕೆಲವು ಧ್ವನಿಗಳು ಹೊರಡಿಸುತ್ತ ಹಾಗೂ ಕುಣಿತದ ಮೂಲಕ ತನ್ನಷ್ಟಕ್ಕೆ ತಾನೇ ಆನಂದಪಟ್ಟು ತನ್ನವರಿಗೂ ಸಂತೋಷ ಪಡಿಸುತ್ತಿದ್ದನು. ಅವನ ಬಾಳಿನ ಬೇಡಿಕೆಗಳು ಕೆಲವೇ ಕೆಲವುಗಳಿದ್ದವು, ಅವುಗಳಲ್ಲಿ ಮುಖ್ಯವಾಗಿ ಹಸಿವು, ನೀರಡಿಕೆಗೆ ಸಂಬಂಧಿಸಿದವು. ಆ ತೃಪ್ತಿಯ ಭರದಲ್ಲಿ ಅವನ ಕೈ ಕಾಲುಗಳು ಮತ್ತು ಕಣ್ಣು, ಮೂಗು, ಬಾಯಿ ತಾವಾಗಿಯೇ ಕ್ರೀಯೆ–ಪ್ರತಿಕ್ರೀಯೆ ಎಂಬಂತೆ ನರ್ತಿಸುತ್ತಿದ್ದವು. ಅವನು ತನ್ನ ಕಣ್ಮುಂದೆ ಕುಣಿಯುತ್ತಿದ್ದ ದನ, ಕರು, ಪ್ರಾಣಿ–ಪಕ್ಷಿಗಳನ್ನು ಕಂಡಿದ್ದ. ಹಾಲು ಕುಡಿದು ತೃಪ್ತಿ ಹೊಂದಿದ ಮರಿಕರುಗಳು ಎಳೆ ಬಿಸಿಲಿನಲ್ಲಿ ಕುಣಿದಾಡಿದನ್ನು ನೋಡಿರಬೇಕು. ಅದೇ ರೀತಿಯಾಗಿ ನವಿಲಿನ ಲಯ ಬದ್ಧವಾದ ಕುಣಿತ, ನೋಡಿ ಆನಂದಿಸಿರಬೇಕು. ಇನ್ನು ನಿಸರ್ಗದಲ್ಲಿಯ ನೀರತೆರೆಗಳು, ದಬದಬೆಗಳ ಮಂಜುಳನಾದ, ಕೋಗಿಲೆ ಎಂಥ ಪಕ್ಷಿಗಳ ಇಂಚರ, ಈ ಎಲ್ಲ ಸೃಷ್ಟಿಯ ಲಯಲಾವಣ್ಯಗಳು ಗಮನಿಸಿ ಅವುಗಳು ಅವನ ಮನಸ್ಸಿನ ಮೇಲೆ ಅನುಕರಣ ಭಾವನೆಯನ್ನು ಮುಡಿಸಿರಬೇಕು. ಅದರಂತೆ ಮಾನವನು ತನಗೆ ಸುಖ ಸಂತೋಷ ಉಂಟಾದಾಗ ತನ್ನಂಗ ಚಲನೆಗಳು ಸ್ಫೂರ್ತಿ ಪಡೆದು ಕುಣಿತ ಪ್ರಾರಂಭವಾಗಿರಬೇಕು. ತನ್ನ ಆತ್ಮ ತೃಪ್ತಿಗಾಗಿ ಒಬ್ಬನ ಕುಣಿತ ತನ್ನ ಹತ್ತಿರವಿರುವ ಮತ್ತೊಬ್ಬನಿಗೆ ಆನಂತರ ಇತರರಿಗೆ ಸ್ಫೂರ್ತಿ ನೀಡಿ ಅವರು ಸಹ ಅವನೊಡನೆ ಕುಡಿಕೊಂಡು ಕುಣಿಯುವಂತಾಯಿತು. ಈ ರೀತಿಯಾಗಿ ಮೊದಮೊದಲು "ಕುಣಿತ" ಪ್ರಾರಂಭವಾಯಿತೆಂದು ಹೇಳಬಹುದು.

ಸಂಘ ಜೀವಿಯಾದ ಮನುಷ್ಯ ಅನೇಕ ನಂಬಿಕೆ, ಸಂಪ್ರದಾಯ, ರೂಢಿ, ಸಂಸ್ಕಾರ, ವಿಧಿವಿಧಾನ ಮತ್ತು ಆಚರಣೆ, ಅನುಕರಣೆಗಳು ಅವನ ಬಾಳಿನ ಉದ್ದಕ್ಕೂ ಅವು ಹಾಸುಹೊಕ್ಕಾಗಿ ಬೆಳೆದುಮಕೊಂಡು ಬಂದವು. ಅವುಗಳು ತಮ್ಮಲ್ಲಿಯ ಆತ್ಮ ವಿಶ್ವಾಸಕ್ಕಿಂತಲೂ ಪ್ರಕೃತಿಯಲ್ಲಿ ನಡೆಯುವ ವಿಧಿ ವೈಚಿತ್ರ್ಯಗಳಿಲ್ಲಿಯೇ ಹೆಚ್ಚು ವಿಶ್ವಾಸ ಬೆಳೆಸಿಕೊಂಡು ಅವುಗಳನ್ನು ಅನುಸರಿಸಿ ಅವುಗಳ ಅರ್ಭಟಕ್ಕೆ ಹೆದರಿ ನಡೆಯುವುದರಿಂದಲೇ ತಮ್ಮ ಜೀವನ ಮುಂದೆ ಸಾಗಲು ಸಾಧ್ಯ ಎಂದು ನಂಬಿ ಬದುಕನ್ನು ನಡೆಸಿದನು. ಈ ಕಾರಣಕ್ಕಾಗಿ ಇಂತಹ ಪ್ರಭಲ ಶಕ್ತಿಗಳನ್ನೆಲ್ಲಾ ನಾನಾ ರೀತಿಯಲ್ಲಿ ಪೂಜಿಸುವುದರ ಮೂಲಕ ಅವುಗಳನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿದ. ಅವುಗಳಿಗೆ ಪ್ರಿಯವಾದ ರೀತಿಯಲ್ಲಿ ತಾನು ಕಂಡಕೊಂಡಂತೆ ಪೂಜಿಸತೊಡಗಿದ. ತಾನು ಕುಣಿದು ತನಗೆ ತೋರಿದ ರೀತಿಯಲ್ಲಿ ಹಾಡಿ ಹೊಗಳುವುದರ ಮೂಲಕ

ಅವುಗಳನ್ನು ಒಲಿಸಿಕೊಳ್ಳಬಹುದೆಂದು ಭಾವಿಸಿ ಅದರಂತೆ ನಡೆದ. ಆ ಪ್ರಭಲ ಶಕ್ತಿಗಳ ಗುಣಗಾನ ಮಾಡತೊಡಗಿದ. ಈ ಎಲ್ಲದರ ಹಿನ್ನೆಲೆಯ್ಲ್ಲಿಯೂ ನಾವು ಕಾಣುವುದು ಅವನಲ್ಲಿ ಪ್ರಭಲವಾಗಿ ಅಡಗಿಕೊಂಡಿದ್ದ ಭಯ. ಆ ಭಯದಿಂದಾಗಿ ಮಾನವನಲ್ಲಿ ಈ ಎಲ್ಲ ಆರಾಧನಾ ವೈವಿಧ್ಯಗಳು ಆರಂಭಗೊಂಡವು. ಅಲ್ಲದೇ ಪಂಚಭೂತಗಳ ಶಕ್ತಿಯ ಕಲ್ಪನೆಯು ಅವನಲ್ಲಿ ಪ್ರಭಲವಾಗುತ್ತಾ ಬಂತು. ಅವುಗಳನ್ನು ಶಮನ ಗೊಳಿಸುವಲ್ಲಿ ಮತ್ತು ವಶೀಕರಸಿಕೊಳ್ಳುವ ನಾನಾ ಬಗೆಯ ಪೂಜೆಯ ವಿಧಿ ವಿಧಾನಗಳನ್ನು ವಿವಿಧ ರೀತಿಯಲ್ಲಿ ಪೂಜಿಸಿತೊಡಗಿರಬಹುದು. ಆ ಪ್ರಭಲ ಶಕ್ತಿಯಲ್ಲಿ ಭೂತದ ಕಲ್ಪನೆಯು ಮಾಡಿಕೊಂಡು ಅದರಂತೆ ವೇಷಧರಿಸಿ, ನಾನಾ ಬಗೆಯ ಭಂಗಿಯಲ್ಲಿ ಕುಣಿದು, ಹಾಡುವುದರ ಮೂಲಕ ಅವುಗಳನ್ನು ಹೊತ್ತು ಕುಣಿಯುವವರ ಒಂದು ವರ್ಗವಾದರೆ ಅವುಗಳಿಗೆ ಸಂಬಂಧಿಸಿದ ನಾಮ ವಿಶೇಷಗಳ ಹಾಡನ್ನು ಹಾಡಿ ಕುಣಿಯುವವರು ಮತ್ತೊಂದು ವರ್ಗವಾದರು. ತಮ್ಮ ಕಷ್ಟ, ಸುಖಗಳನ್ನು ಆ ದೇವತೆಗಳ ಅಥವಾ ಪ್ರಭಲ ಶಕ್ತಿಗಳ ಮುಂದೆ ಹೇಳಿಕೊಳ್ಳುವಲ್ಲಿ ಒಂದು ಬಗೆಯ ಸಂಭಾಷಣೆಯೂ ಅಲ್ಲಿ ಸೇರಿಕೊಂಡಿರಬಹುದು. ಇವೆಲ್ಲವೂ ಸೇರಿ ಒಟ್ಟಾಗಿ ನಾಟಕದಂತಹ ಒಂದು ಕಲೆಯ ಕಲ್ಪನೆ ಮೂಡಿಬಂದಿತು. ಇದಕ್ಕೆ ಸ್ಪಷ್ಟ ಆಧಾರಗಳನ್ನು ಕೊಡಲು ಸಾಧ್ಯವಾಗದೆ ಹೋದರೂ ಜನಪದ ನಾಟಕಗಳ (ಆಟಗಳ) ಬೀಜ ರೂಪ ಇಲ್ಲಿಯೇ ಕುಡಿಯೊಡೆದುದ್ದು ಎನ್ನುವುದರಲ್ಲಿ ಸಂಶಯವಿಲ್ಲ.

ಪ್ರಕೃತಿ ಆರಾಧನೆ, ದುಷ್ಟಶಕ್ತಿಗಳ ವಶೀಕರಣ ಮುಂತಾದ ಸಂದರ್ಭದಲ್ಲಿ ಉಂಟಾದ ಈ ಧಾರ್ಮಿಕ ನೃತ್ಯ ಜನಪದ ಆಟಗಳ ಹುಟ್ಟಿಗೆ ಬಹುಮಟ್ಟಿಗೆ ಪ್ರೇರಣೆಗಳಾಗಿವೆ. ಈ ಧಾರ್ಮಿಕ ನೃತ್ಯಗಳಲ್ಲಿ ಕೆಲವು ತಮ್ಮ ಅಸ್ತಿತ್ವವನ್ನುಳಿಸಿಕೊಂಡು, ಭಕ್ತಿ ಮಾರ್ಗ ಮನರಂಜನೆ, ಸಾಧನವಾಗಿ ಬೆಳೆದುಬಂದವು. ಈ ಎಲ್ಲವುಗಳ ಪ್ರೇರಣೆ ಹಾಗೂ ಪ್ರಭಾವದಿಂದ ತಮ್ಮ ಅಸ್ತಿತ್ವವನ್ನು ಪಡೆದುಕೊಂಡು ಜನಪದ ನಾಟಕ ಕಲೆಯು ಒಂದು ಸ್ವತಂತ್ರ ಕಲೆಯನ್ನುವಂತೆ ವಿಶಿಷ್ಟ ರೀತಿಯಿಂದ ಬೆಳೆದುಬಂದಿತು.

ಜನಪದ ಆಟ (ನೃತ್ಯ)ಗಳು ಹೀಗಲ್ಲದೆ ಬೇರೊಂದು ರೀತಿಯಲ್ಲಿ ಬೆಳೆದು ಬಂದಿರಬಹುದೆಂದು ಊಹಿಸುವುದು ಕೇವಲ ಅಸಂಗತವಾಗುತ್ತದೆ. ಜನಪದ ನೃತ್ಯದ ಬಗೆಗಳನ್ನು ಸೂಕ್ಷ್ಮವಾಗಿ ಗಮನಿಸಿ, ಜನಪದ ಬಯಲಾಟಗಳ ಮೂಲಕ ಯಾವುದೆಂಬುದನ್ನು ಗಮನಿಸಿದಾಗ ಹೆಚ್ಚು ವಾದವಿವಾದವಿಲ್ಲದೆ ಇದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಏಕೆಂದರೆ ಬಹುತೇಕ ಜನಪದ ನೃತ್ಯಕಲೆಗಳನ್ನು ಪರಿಶೀಲಿಸಿದಾಗ ನಮಗೆ ಕಾಣಬರುವುದು ನಾಟಕೀಯ ಅಂಶಗಳೆ. ಜನಪದ ನೃತ್ಯ, ರಂಗಕಲೆಗಳ ವೇಷಭೂಷಣಗಳಲ್ಲಿ ಕಂಡುಬರುವ ರೂಪವೇ ಜನಪದ ಬಯಲಾಟಗಳ ಪಾತ್ರಗಳ ವೇಷಬಾಷಣಗಳನ್ನು ನೋಡಿದಾಗಲೂ ಹೆಚ್ಚು ಅಂತರವಿಲ್ಲವೆಂದು ಕಂಡುಬರುತ್ತದೆ.

ಜನಪದ ರಂಗಕಲೆಗಳಲ್ಲಿಯ ನೃತ್ಯಗಳ ಮೂಲಸ್ಥಿತಿಯನ್ನು ಗಮನಿಸಿದಾಗ ಪಾತ್ರಗಳಲ್ಲಿ ಭಾಗವಹಿಸಿದವರಿಗೂ, ಪ್ರೇಕ್ಷಕ ವರ್ಗಕ್ಕೂ ನಿಕಟವಾದ ಸಂಬಂಧವಿರುತ್ತದೆ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ನೃತ್ಯ ಕಲೆಯು ಕಾಲಾಂತರದಲ್ಲಿ ಇದು ಸಾಕಷ್ಟು ಪರಿಷ್ಕಾರ ಹೊಂದಿ ರಂಗಕಲೆಯಾಗಿ ಪರಿವರ್ತನೆಗೊಂಡಿರುವುದೆಂದು ತಿಳಿದು ಬರುತ್ತದೆ. ಅದರಂತೆ ರಂಗಕಲೆಯಲ್ಲಿಯ ನಿರ್ಧಿಷ್ಟವಾದ

ವೇಷಭೂಷಣಗಳನ್ನು ಧರಿಸಲು ಮೊದಲ ಮಾಡಿದ ಮೇಲೆ ಆಯಾ ವ್ಯಕ್ತಿಗಳೇ ಅದರಲ್ಲಿ ಮುಂದುವರಿಯಬೇಕಾಗುತ್ತಿತ್ತು. ಏನೇ ಆದರೂ ಈ ಎರಡು ವರ್ಗಗಳ ಒಂದೇ ಸಂಸರ್ಗದಿಂದ ಜನಪದ ನಾಟಕದಂತಹ ಒಂದು ಕಲೆ ರೂಪತಾಳಿತು. ಬರುಬರುತ್ತಾ ಮನರಂಜನೆಯ ಸಾಧನವಾಗಿ ಬಳಕೆಯಲ್ಲಿ ಬಂದು ಜನಪದ ರಂಗಭೂಮಿಗೆ "ಬಯಲಾಟ"ದ ಪರಂಪರೆ ಎದಗಿಸಿಕೊಟ್ಟಿದೆ ಎಂದು ಹೇಳಬಹುದು.

ಜನಪದ ಸಾಹಿತ್ಯ ಸಮಷ್ಟಿ ಸಾಹಿತ್ಯ ಎನ್ನುವಂತೆ "ಬಯಲಾಟವು ಒಂದು ಸಮಷ್ಟಿ ಕಲೆ, ಸಾಮುದಾಯಿಕ ಕಲೆ ಎಂದು ಹೇಳಬೇಕಾಗುತ್ತದೆ. ಅದು ಮತ, ಧರ್ಮಗಳಿಂದ ಪ್ರೇರಣೆಗೊಂಡಿದ್ದು ಸತ್ಯ. ಕುಂಕುಮ ಸೇವೆ, ಸಂಗೀತ ಸೇವೆ, ನೃತ್ಯ ಸೇವೆ ಇದ್ದ ಹಾಗೆ ಬಯಲಾಟವೂ ಒಂದು ದೇವರ ಸೇವೆಯಾಗಿತ್ತು".[೧] ಅದರ ಕಲಿಕೆಯನ್ನು ಆರಂಭಿಸುವಾಗ, ಮುಗಿಸುವಾಗ, ಪ್ರದರ್ಶಿಸುವಾಗ ಭಾವತರು ಹಿಮ್ಮೇಳಗಾಯಕರು ಮತ್ತು ನಟರು ನಡೆಸುವ ಪೂಜಾ ವಿಧಿಗಳಿಂದ ಈ ಅಂಶ ಸ್ಪಷ್ಟಪಡುತ್ತದೆ. ಅಷ್ಟೇ ಅಲ್ಲ, ಹಿಂದಿನ ಕಾಲದಲ್ಲಿ ಅದು ಪ್ರದರ್ಶಿತವಾಗುತ್ತಿದ್ದು ದೇವಾಲಯದ ಮುಂದೆ, ದೇವರ ಮುಂದೆ, ಊರಲ್ಲಿ ರೋಗರುಜಿನಿಗಳು, ಅರಿಷ್ಟಗಳು ಸಂಭವಿಸಿದ್ದಾದರೆ ಇಲ್ಲವೇ ಮಳೆ ಬಾರದೆ ಇದ್ದರೆ, ಸಮುದಾಯದಲ್ಲಿ ಕೇಡು ಉಂಟಾದರೆ ಪುರಾಣ, ಭಜನೆ ಮಾಡುವಂತೆ ಬಯಲಾಟಗಳನ್ನು ಆಡಿಸುತ್ತಿದ್ದರು. ಇದರಲ್ಲಿ ಧಾರ್ಮಿಕ ಭಾವನೆಗಳು ಮೂಡುವುದರೊಂದಿಗೆ, ಮನರಂಜನೆಯು ಸೇರಿಕೊಂಡು "ಬಯಲು ರಂಗಕಲೆ"ಯಾಗಿ ಬೆಳೆದು ಬಂದಿತು.

ಜನಪದ ಕಲೆ ನಿಂತ ನೀರಲ್ಲ, ಅದು ನಿರಂತರ ಹರಿಯುವ ಪ್ರವಾಹ. ಆಯಾ ಪ್ರದೇಶದ ಮಣ್ಣಿನ ಗುಣವನ್ನು ಅಳವಡಿಸಿಕೊಂಡು ಜನತೆಯ ಜೀವಂತ ಪ್ರತಿನಿಧಿಯಾಗಿ ಕಂಗೊಳಿಸುತ್ತ ಬಂದಿರುತ್ತದೆ. ಅದು ಒಬ್ಬರ ಸೊತ್ತಲ್ಲ. ಸೃಷ್ಟಿಯ ಅಲ್ಲ. ಇಡಿ ಸಮುದಾಯದ ಸೃಷ್ಟಿಯಾಗಿದ್ದು, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಆಯಾ ಕಲೆಗಳ ಪ್ರಭಾವ ಬಿರುವುದು ಸ್ವಾಭಾವಿಕವಾಗಿರುತ್ತದೆ. "ಕರಾವಳಿಯ 'ಯಕ್ಷಗಾನ ಕಲೆಯ' ಮೇಲೆ ಕೇರಳದ 'ಕಥಕ್ಕಳಿಯ' ಪ್ರಭಾವವಾದಂತೆ ಉತ್ತರ ಕರ್ನಾಟಕದ 'ಬಯಲಾಟಗಳ' ಮೇಲೆ, ಆಂದ್ರಪ್ರದೇಶದ 'ಭಾಮಾಕಲಾಪಂ', ಮಹಾರಾಷ್ಟ್ರದ 'ತಮಾಶಾ', ತಮಿಳನಾಡಿನ 'ಮೋಹಿನಿಯಟ್ಟಂ' ಪ್ರಭಾವ ಬಿರಿದ್ದನ್ನು ಕಂಡುಕೊಳ್ಳಬಹುದಾಗಿದೆ".[೨] ಜನಪದ ಕಲಾವಿಧರಿಗೆ ಜಾತಿ-ಭಾಷೆ, ದೇಶಗಳ ಕಟ್ಟುಪಾಡುಗಳಿಲ್ಲ. ಕಲೆಯ ಪ್ರದರ್ಶನವೇ ಅವರ ಮುಖ್ಯ ಗುರಿ. ಹೀಗಾಗಿ ಗಡಿಸೀಮೆ ಕಲೆಗಳು ಒಂದರ ಮೇಲೊಂದು ಪ್ರಭಾವ ಬೀರುವುದು ಸಹಜವಾಗಿದೆ.

ಆಂದ್ರ ಪ್ರದೇಶದಲ್ಲಿ ತೆಲಗು ಭಾಷೆಯ ಹರಿಕಥೆ (ವೈಷ್ಣವ)ಯ ಭಕ್ತಿಪಂಥ ಹಾಗೂ ಸಂಸಾರಿಕ ಕಥೆಗಳನ್ನಾಧರಿಸಿದ "ಭಾಮಾಕಲಾಪಂ" ಎಂಬ ಹೆಸರಿನ ಒಂದು ಪ್ರಕಾರವು ಜನಪ್ರಿಯವಾದ ನೃತ್ಯ-ನಾಟಕವಾಗಿ ರೂಪಗೊಂಡಿದೆ. ಕಥೆಯು ಕೃಷ್ಣ ಮತ್ತು ಅವನ ಪ್ರೀತಿಯ ಕಿರಿಯ ಹೆಂಡತಿ ಸತ್ಯಭಾಮೆಯರದು. ಹಾಡಿಕೆಯಲ್ಲದೆ ವಿವಿಧ ಹಾವ-ಭಾವಗಳನ್ನು ಅಭಿವ್ಯಕ್ತಪಡಿಸುವ ನರ್ತನೆಗಳು ಕಾಣುತ್ತವೆ. ಜನಪ್ರೀಯತೆಗಾಗಿ ಈ ಕಥೆ ಒಂದು ವಿಶಿಷ್ಟ ಬಯಲಾಟ ಪ್ರಕಾರವಾಗಿ ಬೆಳೆದು ಬಂದಿದೆ.

೧. ಜನಪದ ಅಧ್ಯಯನ – ದೆ. ಜ. ಗೌ. ಪುಟಸಂಖ್ಯೆ : ೨೦೮

೨. ರಾಧಾ ನಾಟಕ – ಎಂ. ಎಸ್. ಲಕ್ಕಿ. ಪುಟಸಂಖ್ಯೆ : ೩

ಈ ಜನಪ್ರೀಯತೆಗೆ ಈ ಬಯಲಾಟದಲ್ಲಿ ಬರುವ ಕಥಾ ವಸ್ತುವೇ ಕಾರಣ. ಶ್ರೀಕೃಷ್ಣನ ಹೆಂಡಿತಿಯರಲ್ಲಿ ತುಂಬ ಹೊಟ್ಟೆ ಕಿಚ್ಚಿನ ಅಸಹನೆಯ ಜಗಳಗಂಟಿತನವುಳ್ಳ ಹೆಂಡತಿ ಸತ್ಯಭಾಮೆ. ಆದರೆ ಅತ್ಯಂತ ಉತ್ಕಟವಾಗಿ ಶ್ರೀಕೃಷ್ಣನನ್ನು ಪ್ರೇಮಿಸುವವಳು ಅವಳೆ. ಇದು ತೀರ ಜನಸಾಮಾನ್ಯರಲ್ಲಿ ದ್ವಿಪತ್ನಿತ್ವ ಹೊಂದಿದ ಪುರುಷನ ವಸ್ತು ಸ್ಥಿತಿಯು ಆಗಿದೆ. ಅದಕ್ಕಾಗಿ ಸಹಜ ಜೀವನವೂ ಹಾಸ್ಯ ಪೂರ್ಣವು ಆದ ಸಂಭಾಷಣೆಗೆ ಎಡೆಮಾಡಿಕೊಡುತ್ತದೆ. 'ರಂಗದ ಮೇಲೆ ದೂತಿಯ ಪಾತ್ರವು ಕನ್ನಡದ ಗೀತಗೋವಿಂದ'ದಲ್ಲಿ ಬರುವ ರಾಧೆಯ ಗೆಳತಿಯಂತೆ ಈ ದೂತಿಯು ಒಬ್ಬರಿಂದೊಬ್ಬರಿಗೆ ಸಂದೇಶ ಒಯ್ಯುವುದು ಹಾಗೂ ಪ್ರೇಕ್ಷಕರಿಗೆ ರಂಗದ ಮೇಲೆ ಬರುವ ಪಾತ್ರಗಳ ಪರಿಚಯ ಮಾಡಿಕೊಡುವುದು ಮಾತ್ರವಲ್ಲ ಬೇಕಾದಷ್ಟು ಜಾಣ್ಮೆ ಬುದ್ಧಿವಂತಿಕೆಗಳನ್ನು ಒದಗಿಸುತ್ತದೆ. ಅದೇ ರೀತಿ ತೆಲುಗಿನಲ್ಲಿಯ ಪ್ರಾಚೀನವಾದ ಹಾಡಿಕೆಯ ರೂಪದ ಒಂದು ಪ್ರಕಾರವಾದ 'ಬುರ್ರಕಥಾ'ದಲ್ಲಿ ನಾಯಕನಿಗೆ ಸಹಾಯ ಮಾಡುವ ಪಾತ್ರಗಳು ಇಲ್ಲಿವೆ. ಅದೇ ರೀತಿಯ ದಕ್ಷಿಣ ಕನ್ನಡ ಜಿಲ್ಲೆಯ 'ಯಕ್ಷಗಾನವು' ಜನಪದ ನಾಟಕ ಪ್ರಕಾರದಲ್ಲಿ ಹಾಗೂ ತೊಗಲುಗೊಂಬೆ ಆಟದಲ್ಲಿಯೂ ನೋಡಬಹುದು. ಈ ಆಟದಲ್ಲಿ ಗೊಂಬೆಯಾಡಿಸುವವನಿಗೆ ಸೂತ್ರಧಾರ ಎಂದು ಹೆಸರು. ಇವನೇ ಹಾಡಿಕೆಯ ಭಾಗವನ್ನೆಲ್ಲ ವಹಿಸಿಕೊಳ್ಳುವನು. ಸಂಭಾಷಣೆಯಲ್ಲಿ ಹಿಮ್ಮೇಳ ಮುಮ್ಮೇಳ ಕಂಠಗಳಿಂದ ನೆರವು ಪಡೆಯುತ್ತಾನೆ. ಈ ರಂಗಕಲೆಯ ಕಥಾವಸ್ತು ಸಾಮಾನ್ಯವಾಗಿ 'ರಾಮಾಯಣ', 'ಮಹಾಭಾರತದ' ಪುರಾಣಗಳಿಂದ ತೆಗೆದುಕೊಂಡಿದೆ. ಈ ರೀತಿಯಾಗಿ ಉತ್ತರ ಮತ್ತು ದಕ್ಷಿಣ ಪ್ರದೇಶಗಳಲ್ಲಿ ವಿವಿಧ ಬಯಲಾಟದ ರಂಗಭೂಮಿಯ ಕಲೆಗಳು ಬೆಳೆದು ಬಂದಿದ್ದನ್ನು ಕಾಣುತ್ತೇವೆ.

ಭಕ್ತಿ ಪಂಥದೊಂದಿಗೆ ಸಂಬಂಧವಿಟ್ಟುಕೊಂಡು ಬಂದ ಜಾನಪದ ರಂಗಭೂಮಿಯ ಜನರ ಸಾಮಾಜಿಕ ಜೀವನದಲ್ಲಿ ಒಂದು ಸ್ಥಾನವನ್ನು ಪಡೆದಿದೆ. ದೇವಾಲಯದ ಅಂಗಳದಲ್ಲಿ ಬೆಳೆದು ಬಂದ ರಂಗಭೂಮಿ ಜನರ ಮನ್ನಣೆ ಪಡೆಯುತ್ತ ಬಯಲಿಗೆ ಬಂದು ಬಯಲಾಟವಾಗಿದ್ದೆ. ತಡ ಅದು ಒಂದು ಬಗೆಯ ಧಾಮಿಕ ಆಚರಣೆಯಾಗಿ ಭಕ್ತಿಪಂಥ, ಸಂತ, ದೇವತೆ, ಹೀಗೆ ನಾನಾರೀತಿಯ ಕಥಾವಸ್ತು ಒದಗಿಸಿಕೊಟ್ಟಿತು. ಆದ್ದರಿಂದಲೇ ಬಯಲಾಟಗಳು ಹೆಚ್ಚು ಹೆಚ್ಚು ಚಟುವಟಿಕೆಯಿಂದ ಆಕರ್ಷಿಸಿತು. ಅದಕ್ಕಾಗಿಯೇ ಸುಗ್ಗಿಯು ಮುಗಿಯುತ್ತಿದ್ದಂತೆ ಒಂದು ನಾಟಕವನ್ನು ಏರ್ಪಡಿಸುವುದು. ಪ್ರತಿ ಗ್ರಾಮ, ಹಳ್ಳಿಗಳಲ್ಲಿ ಪದ್ಧತಿಯಾಗಿ ಬೆಳೆದು ಬಂದಿತು. ಪರೋಕ್ಷವಾಗಿ ಅದು ಗ್ರಾಮದ ಜಾತ್ರೆ ಉತ್ಸವ, ದೇವತೆ, ಮಳೆದೇವರ, ಭೂತಾಯಿ, ವಂದನೆ ಅರ್ಪಿಸುವ ಅರ್ಪಣಾಭಾವ ಜನಸಾಮಾನ್ಯರಲ್ಲಿ ಬೆಳೆದು ಬಂದಿತು.

ದುಷ್ಟಶಕ್ತಿಯ ಅಥವಾ ರಾಕ್ಷಸ ಪಾತ್ರಗಳು ಹೊರಗಿನಿಂದ ಹೊಂಕರಿಸುತ್ತ ಅಟ್ಟಹಾಸವನ್ನು ಪ್ರವೇಶ ಮಾಡುತ್ತವೆ. ಆ ಪಾತ್ರಗಳಿಗೆ ಪ್ರೇಕ್ಷಕರನ್ನು ಭಯ ಬೀತಿಯನ್ನು ಹುಟ್ಟಿಸುವಂತೆ ನಟನೆಯಾಗಿರುತ್ತವೆ. ಆದರೆ ದೇವತಾ ಪಾತ್ರಗಳು ಪ್ರೇಕ್ಷಕರಿಗೆ ಶಾಂತಿ, ಉತ್ಸಾಹ ಮತ್ತು ಆನಂದ ನೀಡುವಂತೆ ಮಾಡುತ್ತವೆ. ಇನ್ನೂಳಿದ ಎಲ್ಲಾ ಪಾತ್ರಗಳ ಜನಸಾಮಾನ್ಯರಿಗೆ ಮಾತುಮಾತಿಗೆ ಮುಖ್ಯ ಪಾತ್ರಗಳಿಗೆ ಸಹಾಯಕವಾದ ಮಾತುಗಳು ಆಡುತ್ತ ಸಹೃದಯರಿಗೆ ಹಾಸ್ಯದ ಹೊನಲನ್ನು ಹರಿಯುವಂತೆ ಮಾಡಿ ಮಧ್ಯ ಮಧ್ಯದಲ್ಲಿ ಶೃಂಗಾರ ಭರಿತ ಮಾತುಗಳು ತೇಲಿ ತೇಲಿ ಬಂದು ನಗೆಗಡಲಿಗೆ ನೂಕುತ್ತವೆ.

ಕನ್ನಡ ನಾಡಿನ ಸಮಸ್ತ ಜನಪದ ಮತ್ತು ಶಿಷ್ಟರು ಭಯ–ಭಕ್ತಿ ಉಳ್ಳವರಾಗಿದ್ದರೆ ಸಾಮಾನ್ಯರಂತು ದೈವಿಶ್ರದ್ಧಾ–ಭಕ್ತಿ ಉಳ್ಳವರಾಗಿದ್ದಾರೆ. ಇಂತಹ ನಾಡಿನಲ್ಲಿ ಶರಣರು, ದಾಸರು, ಪವಾಡ ಪುರುಷರು ಮುಂತಾದವರು ಭಕ್ತಿ ಪಂಥಕ್ಕೆ ಪ್ರಶಂಸೆ ನೀಡಿದವರು. ಶರಣರು ಶಿವನನ್ನು, ದಾಸರು ಹರಿಯನ್ನು ಶ್ರೇಷ್ಟ ದೇವರೆಂದು ಶ್ರಮಿಸುತ್ತಾ ಅವರ ಶಕ್ತಿ ಎಲ್ಲೆಡೆಗೂ ಇರಲೆಂದು ಹಾಡುಗಳಲ್ಲಿ ರಂಗಕಲೆಗಳಲ್ಲಿ ಕಾವ್ಯ ಸಾಹಿತ್ಯ ರಸವನ್ನು ತುಂಬಿ ಸಮಾಜದ ಪ್ರತಿಯೊಬ್ಬ ವ್ಯಕ್ತಿಗೂ, ಭಕ್ತಿ, ಶೃಂಗಾರ, ಕರುಣೆ, ವೀರರಸಗಳಿಂದ ತುಂಬಿದ ಕಲಾ ಮಾಧ್ಯಮವನ್ನು ಆರಂಭಿಸಿದರು. ಆ ಕಲಾಕಲೆಯಲ್ಲಿ ಸಣ್ಣಾಟವಾಗಿ ಮೂಡಿಬಂದಿದ್ದು, ಉದಾ–ತಿರುನೀಲಕಂಠ, ಅಲ್ಲಮಪ್ರಭು, ಕನಕದಾಸ, ಕಬೀರದಾಸ ಮುಂತಾದ ಮಹಾ ಪುರುಷರ ಚರಿತ್ರೆಗಳು ಸಣ್ಣಾಟಗಳಾಗಿ ಬೆಳೆದು ಬಂದವು. ಬರುಬರುತ್ತ ಸಾಮಾಜಿಕ ವಸ್ತುವನ್ನು ಆಯ್ದುಕೊಂಡು ಸಣ್ಣಾಟಕ್ಕೆ ಇನ್ನಷ್ಟು ಪ್ರೇರಣೆಯಾಗಿ ಕೆಲವು ಆಟಗಳು ನಮ್ಮಲ್ಲಿ 'ಸಂಗ್ಯಾಬಾಳ್ಯಾ', ರೂಪಸಿಂಗ, ಕಡ್ಲಿಮಡ್ಡಿ ಕಾಶೀಬಾಯಿ ಮುಂತಾದವುಗಳು ಬೆಳೆದು ಬಂದವು. ಸಣ್ಣಾಟಗಳಲ್ಲಿ ಶರಣರು ಶೈವ ಪಂಥವನ್ನು, ವೈಷ್ಣವರು ಹರಿಪಂಥವನ್ನು ಪ್ರಚಾರಕ್ಕಾಗಿಯೇ ಮೂಡಿ ಬಂದವೋ ಏನೋ ಎನ್ನುವಂತೆ ಸ್ಪರ್ಧೆಯಾಗಿ ಬೆಳೆದು ಬಂದವು.

ದಾಸಶ್ರೇಷ್ಟರು ಕೃಷ್ಣಲೀಲೆಗಳನ್ನು ಹಾಡಿ, ಹೋಗಳಿ ಕುಣಿದರು. ಅದೇ ರೀತಿಯಾಗಿ ಜನರನ್ನು ಭಕ್ತಿ ಭಾವದಿಂದ ಕುಣಿಸಿದರು. ದೇವಾಲಯಗಳಲ್ಲಿ ದೇವರ ಆರಾಧನೆಯ ಒಂದು ಅಂಗವಾಗಿ ಈ ಹಾಡು, ಕುಣಿತ, ಅಭಿನಯಗಳು ನಡೆದು ಬಂದವು. ಇದೇ ಶ್ರೀಕೃಷ್ಣ ಪಾರಿಜಾತ ರಂಗಭೂಮಿಗೆ ಮೊದಲ ಸೂತ್ರವಾಗಿರಬೇಕು. ಮುಂದೆ ಹಳ್ಳಿಯಿಂದ ನಗರಗಳಲ್ಲಿ 'ರಂಗಭೂಮಿ ಕಲಾವಿಧರು ಸ್ನೇಹಸಂಬಂಧಗಳು ಬೆಸೆದು, ಒಂದೇ ಕಡೆ ಸೇರತೊಡಗಿದವು. ದೇವಾಲಯ ಮತ್ತು ಬಯಲು ಜಾಗಗಳಲ್ಲಿ ತಮ್ಮ ಕಲಾಸೇವೆ ಪ್ರಾರಂಭಿಸಿದರು. ಕಲಾ ಆರಾಧಕರು ಸೇರಿಕೊಂಡು ರಂಗಕಲಾವಿಧರನ್ನು ಪ್ರೋತ್ಸಾಹಿಸತೊಡಗಿದರು. ಕೆಲ ಕಾಲದ ನಂತರದಲ್ಲಿ ಸ್ತ್ರೀ ಮತ್ತು ಪುರುಷರು ಸೇರಿ ಒಟ್ಟು ಗೂಡಿ ಶ್ರೀಕೃಷ್ಣ ಲೀಲೆಗಳ, ಭಾಗವತ ಘಟನೆಯ ಪ್ರಸಂಗಗಳನ್ನು ಅಭಿನಯಿಸ ತೊಡಗಿದರು. ಇದೇ ಮುಂದೆ 'ದಾಸರಾಟ'ವೆಂದು ಖ್ಯಾತಿ ಪಡೆದು ದಿನಗಳು ಕಳೆದಂತೆ ಈ ಲೀಲೆಗಳು ಅತಿ ಶೃಂಗಾರಕ್ಕೆ ಇಳಿದು ಬಂದವುಗಳಾಗಿದೆ. ಉದಾ : ಗೊಲ್ಲ–ಗೋಪಿಯರ ಲೀಲೆಯ ಪ್ರಸಂಗವು ಶ್ರೀಕೃಷ್ಣ ಪಾರಿಜಾತದ ಪೂರ್ವರಂಗವಾಗಿ ಮುಂದೆ ಬಂದದ್ದಾಗಿದೆ.

ಸಗ್ಗಾಟಗಳಲ್ಲಿ ಮೂರು ವಿಧಗಳಾಗಿ ವಿಂಗಡಿಸಬಹುದು.

೧) **ಪೌರಾಣಿಕ ಕಥಾವಸ್ತು ಆಧರಿಸಿದ್ದು,**

೨) **ಚಾರಿತ್ರಿಕ ಕಥಾವಸ್ತು ಆಧರಿಸಿದ್ದು,**

೩) **ಸಾಮಾಜಿಕ ಕಥಾವಸ್ತು ಆಧರಿಸಿದ್ದು,**

೧) **ಪೌರಾಣಿಕ ರಂಗಭೂಮಿ** : ಈ ರಂಗಭೂಮಿಯಲ್ಲಿ ಬರುವ ಕಥಾವಸ್ತು ಪುರಾಣಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಅಲ್ಲದೇ ಇಲ್ಲಿಯು ಕೂಡಾ ಭಕ್ತಿ ಹಾಗೂ ಚಾರಿತ್ರಿಕ ರಂಗಭೂಮಿಯ ಕಥಾ

ರೂಪವು ಕೆಲವು ಆಟಗಳಲ್ಲಿ ಗುರುತಿಸಬಹುದು. ಉದಾ : ದಕ್ಷಾಬ್ರಹ್ಮ, ತ್ರಿಪುರಸಂಹಾರ, ಮಾರ್ಕಂಡೆಯ, ಸತ್ಯಹರಿಶ್ಚಂದ್ರ, ಭಕ್ತಪ್ರಲ್ಹಾದ, ರುಕ್ಮೀಣಿಸ್ವಯಂವರ ಮುಂತಾದವುಗಳು. ಈ ರಂಗಭೂಮಿಗೆ ಕಳೆ ತರುವುದೇ ವೀರ ಮತ್ತು ಶೃಂಗಾರ-ರಸಗಳ ಪ್ರಸಂಗಗಳು. ಪ್ರಸ್ತುತ ಪೌರಾಣಿಕ ರಂಗಭೂಮಿಗೆ ಕಳೆ ತಂದುಕೊಟ್ಟ ಬಯಲಾಟವೆಂದರೆ 'ಶ್ರೀಕೃಷ್ಣ ಪಾರಿಜಾತ' ಎಂದೇ ಹೇಳಬೇಕಾಗುತ್ತದೆ.

೨) **ಚಾರಿತ್ರಿಕ ರಂಗಭೂಮಿ** : ಸಣ್ಣಾಟಗಳು ಕನ್ನಡದಲ್ಲಿ ಬೆಳೆದು ಬಂದದ್ದು ಬಹಳ ಕಡಿಮೆ. ಏಕೆಂದರೆ ಐತಿಹಾಸಿಕ ಘಟನೆಗಳು ಮತ್ತು ಆ ಘಟನೆಗೆ ಪೂರಕವಾದ ವ್ಯಕ್ತಿಗಳ ಕೊರತೆ ಎದ್ದು ಕಂಡುಬಂದರೂ ಆಯಾ ಕಾಲದಲ್ಲಿ ಜನ ಸಾಮಾನ್ಯರು ಹಾಡಿ ಹೊಗಳುವಂತ ಸನ್ನಿವೇಶ ಮತ್ತು ಚರಿತ್ರೆ ಕಾಣಬರುವುದಿಲ್ಲ. ಬಂದರು ಕೂಡಾ ಅದನ್ನು ಸಾಹಿತ್ಯ ರೂಪಕ್ಕೆ ತಂದು ನಿಲ್ಲಿಸುವಂತ ಕವಿ, ಸಾಹಿತಿಗಳು ಮನಸ್ಸು ಮಾಡಲಿಲ್ಲವೇನೋ ಆ ಕಾರಣಕ್ಕಾಗಿ ಕೆಲವೇ ಕೆಲವು ಆಟಗಳು ನಮ್ಮಲ್ಲಿ ಬೆಳಕಿಗೆ ಬಂದಿವೆ ಎಂದು ಹೇಳಬಹುದು.

೩) **ಸಾಮಾಜಿಕ ಕಥಾವಸ್ತು** : ಸಣ್ಣಾಟಗಳ ತಾಯಿ ಬೇರೆಂಬುವಂತೆ ಈ ಬಯಲಾಟದ ಯುಗವೆ ಪ್ರಾರಂಭವಾಯಿತು. ಇದಕ್ಕೆ ಮೂಲ ಕಾರಣ ಸಮಾಜದಲ್ಲಿ ನಡೆಯುವ ಕಾಮ-ಪ್ರೇಮಗಳು, ಹಾಗೂ ಸಾಮಾಜಿಕ-ಮೌಲ್ಯಗಳನ್ನು ಕಾಪಾಡುವ ಸನ್ನಿವೇಶಗಳು, ಅಲ್ಲದೇ ಸಮಾಜದ ಸ್ವಾಸ್ಥ ಕೆಡಿಸುವಂತಹ ಕಿಡಿಗೇಡಿಗಳನ್ನು ಗುರುತಿಸಿದ ಇಂಥ ಅನೇಕ ಘಟನೆಗಳು ಆಯ್ದುಕೊಂಡು ಕವಿ-ಸಾಹಿತಿಗಳು ಸಣ್ಣಾಟಗಳು ರಚಿಸಿದರು. 'ಸಂಗ್ಯಾಬಾಳ್ಯಾ', 'ಕಡ್ಲಿಮಟ್ಟಿ ಕಾಶೀಬಾಯಿ', 'ದುಂಡ್ಯಾಮೋದಿನ', 'ಮಹಾಲಿಂಗ ಶೆಟ್ಟಿ' 'ನಂದಗೋಪಾಲ' ಮೊದಲಾದ ಆಟಗಳು ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದವುಗಳಾಗಿವೆ. ಇವುಗಳಿಗೆ ಮುಖ್ಯ ಕಾರಣ ಶೃಂಗಾರ, ಕರುಣೆ ಮತ್ತು ಹಾಸ್ಯರಸದೊಂದಿಗೆ ಪ್ರೇಮಿಗಳ ಪಾವಿತ್ರ್ಯ ಒಂದು ಕಡೆ ಆದರೆ, ವಿಕೃತಕಾಮಿಗಳ ಘಟನೆಗಳು ಇನ್ನೊಂದು ಕಡೆ ನಡೆಯುವಂತ ಕಥಾವಸ್ತುಗಳು ಇವೆ. ಇದರಿಂದ ಜನಸಾಮಾನ್ಯರ ಮನೋಭಾವ ಕೆರಳಿಸುತ್ತದೆ. ಉತ್ಸುಹಕತೆ ಹೆಚ್ಚಾಗುತ್ತದೆ. ಹೀಗಾಗಿ ಈ ಆಟಗಳು ಅತ್ಯಂತ ಜನಪ್ರೀಯವಾದವು.

ಜಾನಪದ ಕಲಾಪ್ರಕಾರಗಳು ಬೆಳೆದಂತೆ ಶ್ರೀಕೃಷ್ಣ ಪಾರಿಜಾತವು ತನ್ನ ಮೂಲ ಸ್ವರೂಪದಿಂದ ಬೇರೆ ರೀತಿಯಾಗಿ ಸ್ವಲ್ಪ ಸ್ವಲ್ಪ ಅದು ಈಗಲೂ ಬೆಳೆಯುತ್ತಲೇ ಇದೆ. ಅದರ ಬೆಳವಣಿಗೆಗೆ ಪೂರಕವಾಗಿ ಕಚ್ಚಾಪದಾರ್ಥಗಳ ಪೂರೈಕೆ ಸಮಾಜದಿಂದ ನಿರಂತರವಾಗಿ ಪೂರೈಕೆಯಾಗುತ್ತದೆ. ಅದರ ಪರಿಣಾಮವಾಗಿ ಕಾಲಕ್ಕೆ ತಕ್ಕಂತೆ ಪಾರಿಜಾತ ತನ್ನ ಸ್ವರೂಪವನ್ನು ಬದಲಿಸುತ್ತ ಬಂದಿದೆ.

## ಉದ್ದೇಶ ಮತ್ತು ವ್ಯಾಪ್ತಿ :

ನಾವು ಶ್ರೀಕೃಷ್ಣ ಪಾರಿಜಾತವು ಸಾಮಾಜಿಕವಾಗಿ ನೋಡಿದಿದ್ದರೆ ಶ್ರೀಕೃಷ್ಣನ ಭೋಗಜೀವನ, ಸತ್ಯಭಾಮೆಯ ಅಂತಃಪುರ, ಶೃಂಗಾರ ಇವೆಲ್ಲ ಕೇವಲ ಪೌರಾಣಿಕವಲ್ಲ ಹಾಗೂ ಕಲ್ಪನೆಯು ಅಲ್ಲ.

ಇವೆಲ್ಲ ಕವಿಗಳ ಬದುಕಿನ ಕಾಲದ ರಾಜಮಹಾರಾಜರ ಮಾಂಡಲಿಕರ ಸಂಸ್ಥಾನಿಕರ ಅಂತಃಪುರದ ದೃಶ್ಯಗಳೆ ಆಗಿವೆ. ಇವರಿಗಿರುವ ಉಪಪತ್ನಿಯರು, ಅವರ ಮತ್ಸರ, ಪತಿಯನ್ನು ತನ್ನೆಡೆಗೇ ಸೆಳೆದುಕೊಳ್ಳಬೇಕೆಂದು ನಡೆಸುವ ಪೈಪೋಟಿ ಇಂಥವರ ಮಧ್ಯದಲ್ಲಿ ಸಿಕ್ಕಾಕಿಕೊಳ್ಳುವ ಗಂಡ (ಪುರುಷ) ಇವು ಸಮಾಜದಲ್ಲಿ ಕಂಡ ಕವಿಯ ಸತ್ಯಗಳೇ ಆಗಿವೆ. ತಮ್ಮ ಬದುಕಿಗೆ ತೀರ ಹತ್ತಿರವಾದ ಅನೇಕ ಅಂಶಗಳನ್ನು ಕಾವ್ಯ ಹಿಡಿದಿಟ್ಟದ್ದರಿಂದ ಜನಪದ ಕಲಾವಿದರನ್ನು ಅದು ಆಕರ್ಷಿಸಿತು. ಅಲ್ಲಿಯ ಜೀವನ ತಮಗೆ ಬಹಳ ಸಮೀಪವಾದ್ದರಿಂದ ಜನಪದ ಕಲಾವಿದರಿಗೂ ಹಿಡಿಸಿ, ತಮ್ಮ ದೈನಂದಿನ ಸಂಸಾರಿಕ ಜೀವನಕ್ಕೆ ಸಮೀಪವೆನಿಸಿದ ಇಂಥದೊಂದು ಮಾಧ್ಯಮಕ್ಕಾಗಿ ಸಾಮಾಜಿಕರು ದುಡಿಯುತ್ತಿದ್ದರೆಂದು ತೋರುತ್ತದೆ. ಆದ್ದರಿಂದ ಕೇವಲ ಕಾವ್ಯವಾಗಿದ್ದ ಪಾರಿಜಾತ ರಂಗಕ್ಕೇರಿ ಸಾಂಸಾರಿಕ ದೃಶ್ಯವಾಗುವ ಸಾಧ್ಯತೆಗೆ ಅವಕಾಶ ದೊರೆಯಿತು. ಇದು ಆಕರ್ಷಕ ವಸ್ತುವೆನಿಸಿದ್ದರಿಂದ ಈ ಪಾರಿಜಾಥ ಕಥೆಗೆ ರೂಪಕೊಡಲು ಕವಿಗಳು ಸಿದ್ಧರಾಗಿ ಇಂಥದೊಂದು ಬಯಲಾಟ ರಚಿಸಿದ್ದಾರೆ. ಇದರಲ್ಲಿ ಆಧ್ಯಾತ್ಮ ಚಿಂತನೆ, ಶೃಂಗಾರ, ಲೋಕಜ್ಞಾನ ತುಂಬಿಕೊಂಡು ಪಾರಿಜಾತ ರಂಗಭೂಮಿ ಸಿದ್ಧಪಡಿಸಲಾಗಿದೆ.

ಜನಪದ ಕಲಾವಿಧರಿಗೆ ಶ್ರೀಕೃಷ್ಣನ ಕಥೆ ಹೊಸ ವಿಷಯವೆನಲ್ಲ. ಅವರ ನಿತ್ಯ ಜೀವನದಲ್ಲಿ ಶ್ರೀಕೃಷ್ಣ ಕುಟುಂಬದ ಸದಸ್ಯರ ಪ್ರೀಯ ವ್ಯಕ್ತಿ ಆಗಿದ್ದಾನೆ. ಅವನಿಗೆ ಸಂಬಂಧಿಸಿದ ಕಥೆ, ಹಾಡು, ಪುರಾಣದಲ್ಲಿ ಬರುವ ಸೃಜನವೆನಿಸಿದ ದೃಶ್ಯ ಕಲೆಗಳೆಲ್ಲ ಅಂತರಂಗದಲ್ಲಿ ಮೂಡಿ ಬಂದ ಕಲ್ಪನೆಗಳು. ಅನಂತರ ಬಹಿರಂಗದಲ್ಲಿ ದೃಶ್ಯಕತೆಗಳಾಗಿ ಬಯಲಾಟದ ಅಟ್ಟದ ಮೇಲೆ ಬಂದು ವಿವಿಧ ಆಕಾರಗಳು ಪಡೆದವು.

ಶ್ರೀಕೃಷ್ಣ ಪಾರಿಜಾತ ಬಯಲಾಟದ ಕಥಾವಸ್ತು ಮೂಲ ಪೌರಾಣಿಕವಾಗಿದೆ. ಅದರ ಉದ್ದೇಶ ಮಾತ್ರ ಲೋಕನೀತಿ ಕುರಿತು ಜನಸಾಮಾನ್ಯರಿಗೆ ತಿಳಿ ಹೇಳುವುದಾಗಿದೆ. ಮೂಲತಃ ಮನುಷ್ಯನಲ್ಲಿಡಗಿರುವ ಅರಿಷಡ್ವರ್ಗಗಳು ಮತ್ತು ಪಂಚೇಂದ್ರಿಯಗಳು ಹದ್ದು ಬಸ್ತಿನಲ್ಲಿಟ್ಟು, ಲೋಕವೆಲ್ಲಾ ನೀನೆ ವ್ಯಾಪಿಸಿರುವೆ ಎಂಬ ಭಯ ಭಕ್ತಿಯಿಂದ ಆ ದೇವರಲ್ಲಿ ಪ್ರಾರ್ಥಿಸಿದರೆ ನಮ್ಮೆಲ್ಲ ಕಷ್ಟ ದುಃಖಗಳು ದೂರವಾಗಿ ಜೀವನ ಮುಕ್ತಿ ಸಿಗುತ್ತದೆ ಎಂಬ ಉದ್ದೇಶವನ್ನು ಜನರಲ್ಲಿ ತಿಳಿಸಿಕೊಡುವುದೇ ಮುಖ್ಯ ಆಶಯವಾಗಿದೆ. ಪ್ರಸ್ತುತ ಬಯಲಾಟದಲ್ಲಿ ಶೃಂಗಾರ ರಸವೇ ಮುಖ್ಯವಾಗಿದೆ. ಶ್ರೀಕೃಷ್ಣನು ಧೀರೋದಾತ್ತ ಮತ್ತು ಪುರುಷೋತ್ತಮನಾಗಿದ್ದಾನೆ. ಅದರಂತೆ ಲೀಲಾ ಪುರುಷನೂ ಸರ್ವಜ್ಞನೂ ಆಗಿದ್ದಾನೆ. ಅವನಲ್ಲಿಯ ಲೋಕನೀತಿ, ಕ್ಷಮಾ ಶೀಲತೆ, ಧರ್ಮಭಾವ, ಪತ್ನಿಪ್ರೇಮ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸುವ ಗುಣ ಸಂಪನ್ನನಾಗಿದ್ದಾನೆ. ಒಟ್ಟಿನಲ್ಲಿ ಶ್ರೀಕೃಷ್ಣನಲ್ಲಿದ್ದ ಸರ್ವಗುಣ ಸಂಪನ್ನತೆಯು ಸಾಮಾನ್ಯರು ತಿಳಿದು ತನ್ನ ಬಾಳಿನಲ್ಲಿ ಬೆಳಕು ಕಾಣುವಂತಾಗಬೇಕಿದೆ. ಅದರಂತೆ ಶ್ರೀಕೃಷ್ಣನ ಪ್ರತಿರೂಪ ಪಾತ್ರವೇ ಕೊರವಂಜಿಯ ಪಾತ್ರ. ಈ ಪಾತ್ರವಂತೂ ಹಾಸ್ಯರಸದ ಹೊಳೆಯ ಹರಿಯವಂತಿದೆ. ಗಂಡರೆನಗಿಲ್ಲ ಹೆಂಡಿರನಾಳುವೇ ಗಂಡುಗಾದೇವಿ ನಾನು । ದುಂಡಿ ನಿನಗಂಡ ಚಂಡ ಪ್ರಚಂಡ, ಉದ್ದಂಡ । ಹೀಗೆ ಅನೇಕ ಹಾಸ್ಯಭರಿತ ಮತ್ತು ಅರ್ಥವತ್ತಾದ ಲೋಕ ಜ್ಞಾನವನ್ನು ತಿಳಿಸಿಕೊಡುವ ಕೊರವಂಜಿ ನಾಟಕದ ಹಾಸ್ಯರಸದ ಸೆಲೆಯಾಗಿ, ಸ್ಫೂರ್ತಿಯ ನೆಲೆಯಾಗಿ ನಿಲ್ಲುತ್ತಾಳೆ. ಹೀಗೆ ಪಾರಿಜಾತದಲ್ಲಿ ಬರುವ ಪ್ರತಿಯೊಂದು

ಪಾತ್ರಗಳು ಒಂದೊಂದು ವಿಶೇಷತೆಯನ್ನು ಹೊಂದಿದೆ. ಅದಕ್ಕಾಗಿ ಪಾರಿಜಾತ ಬಯಲಾಟವು ಹೆಚ್ಚಾಗಿ ಸಮಾಜದ ಓರೋಕೋರೆಗಳನ್ನು ತಿದ್ದಿ ಮಾರ್ಗದರ್ಶನ ನೀಡುವ ಜೀವನಾನುಭವದ ಆಟವಾಗಿದೆ.

ಶ್ರೀಕೃಷ್ಣ ಪಾರಿಜಾತವು ಸಮಾಜದ ಯಾವುದೇ ಜಾತಿ, ಧರ್ಮ, ಕುಲ ಎನ್ನದೇ ಮತ್ತು ಹಿರಿಯ ಕಿರಿಯ, ಬಡವ ಬಲ್ಲಿದ, ಸ್ತ್ರೀ-ಪುರುಷ ಎನ್ನದೇ ಸಮೂಹದಲ್ಲಿ ಎಲ್ಲರು ಒಟ್ಟಿಗೆ ಕುಳಿತುಕೊಂಡು ನೋಡುವ, ಕೇಳುವ ಕಥಾವಸ್ತುವಾಗಿದೆ. ಜನರು ಈ ಕಲೆಯನ್ನು ತಮ್ಮ ಗ್ರಾಮದ ಓಕಳಿ, ಜಾತ್ರೆ ಉತ್ಸವಗಳಲ್ಲಿ ಹಾಗೂ ಊರಿನ ವಿಶೇಷ ಹಬ್ಬ-ಹರಿದಿನಗಳಲ್ಲಿ ತಮ್ಮೂರಿನವರೆ ಕೂಡಿಕೊಂಡು 'ಶ್ರೀಕೃಷ್ಣ ಪಾರಿಜಾತ'ದ ಆಟದ ಮಾತುಗಳನ್ನು ಹಾಗೂ ಹಾವಭಾವ ಭಂಗಿಗಳನ್ನು ಮತ್ತು ರಾಗ, ತಾಳ, ಲಯಗಳು ರಂಗಭೂಮಿ ಕಲಾ ಆಟದ ಮಾಸ್ತರನಿಂದ ತಿಂಗಳುಗಂಟಲೇ ತರಬೇತಿಯ ಬೈಟಕಿ ಮಾಡಿ ಊರಿನ ದೇವಾಲಯ ಇಲ್ಲವೇ ಊರಿನ ಪ್ರಮುಖ ಬಯಲು ಜಾಗದಲ್ಲಿ ಅಟ್ಟವನ್ನು ನಿರ್ಮಿಸಿ ರಾತ್ರಿ ಹತ್ತು ಗಂಟೆಯಿಂದ ಬೆಳಕು ಹರಿಯುವವರೆಗೆ ಆಟವನ್ನು ಪ್ರದರ್ಶನ ಮಾಡಿ, ತಮ್ಮ ಗ್ರಾಮದವರಿಂದ ಬಹುಮಾನ ಮತ್ತು ಬಟ್ಟೆ ಆಯರಿಗಳು ಪಡೆದು ಬೇಷ! ಎನಿಸಿಕೊಳ್ಳುವರು. ಇಂಥಾ ಕಲಾವಿಧರು ತಮ್ಮ ಹತ್ತಿರದ ಗ್ರಾಮದವರಿಂದ ಎಲೆ, ಅಡಿಕೆ, ವಿಳ್ಯೆ ಪಡೆದು ಆ ಊರಿನ ಓಕಳಿ ಉತ್ಸವಗಳಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿ ಪ್ರೇಕ್ಷಕರಿಗೆ ಮನಸ್ಸು ತಣಿಸುತ್ತಿದ್ದರು. ಹೀಗೆ ಸಮಾಜದ ಸರ್ವ ಮಾನ್ಯತೆ ಪಡೆದ ರಂಗಕಲೆಯ ಬರುಬರುತ್ತ ವೃತ್ತಿ ರಂಗಭೂಮಿಯಾಗಿ ಮತ್ತು ಹವ್ಯಾಸಿ ರಂಗಭೂಮಿ, ಕಲಾ ತಂಡಗಳಾಗಿ ಬೆಳೆದು ಇಂದಿಗೂ ಕೂಡಾ ಕರ್ನಾಟಕದಾದ್ಯಂತ ಜೀವಂತವಾಗಿವೆ.

ಶ್ರೀಕೃಷ್ಣ ಪಾರಿಜಾತದಲ್ಲಿ ಹಲವು ಪಾತ್ರಗಳು ಬರುತ್ತವೆ. ಮೊದಲನೆದಾಗಿ ಗಣಪತಿ, ಗೊಲ್ಲತಿ-ಗೋಪಾಲ, ಶ್ರೀಕೃಷ್ಣ-ರುಕ್ಮಿಣಿ, ಸತ್ಯಭಾಮಾ, ನಾರದ, ದೂತಿ, ಭಾಗವತ ಹೀಗೆ ಪಾತ್ರಗಳು ಬರುವಂತೆ ಪಾರಿಜಾತದಲ್ಲಿ ಸರ್ವರ ಮನ ಸೆಳೆಯುವ ಪಾತ್ರವೆಂದರೆ ಕೊರವಂಜಿಯ ಪಾತ್ರ. ಅವಳ ಉಡುಗೆ-ತೊಡುಗೆಗಳು ಸಾಮಾನ್ಯ ಸ್ತ್ರೀಯಂತೆ ಇದ್ದರು, ಅವಳುಡುವ ಸೀರೆ ವಿಧಾನ ಮಾತ್ರ ಭಿನ್ನವಾಗಿದೆ. ಅವಳುಡುವ ಸೀರೆಯ ಸೆರಗು ಬಲದಿಂದ ಎಡಕ್ಕೆ ಉಟ್ಟು ಸ್ವಲ್ಪ ಉಳಿದ ಸೆರಗು ಡೊಂಕಕ್ಕೆ ಸುತ್ತಿರುತ್ತಾಳೆ. ಅವಳ ವೇಷ-ಭೂಷಣ ಕೊರವಂಜಿಯ ವೇಷದಂತೆ ಕಂಡರು, ದೇವಲೋಕದ ಕೊರವಿ ಅವಳು. ಕೊರವಿಯನ್ನು ಕಂಡ ಸತ್ಯ ಭಾಮೆಯ ಅಂತರಂಗದ ತಾಪ ಪ್ರಜ್ವಲಿಸುತ್ತದೆ. "ಇವಳೇನು ಕೊರವೆಯೋ, ಮನ್ಮಥನ ರೂಪವೋ ಎಂದು ಬೆರಗಾಗುವಳು. ಪುರುಷರಲ್ಲಿ ಮನ ಬೆರೆಯಬಹುದು. ಈ ಸಂಚಾರಿ ಕೊರವಿಯಲ್ಲಿ ಅದು ಸ್ತ್ರೀಯಲ್ಲಿ ಮನ ಸೋಲುವುದೇ? ಎನ್ನುವಷ್ಟರ ಮಟ್ಟಿಗೆ ಪ್ರೇಕ್ಷಕ ವರ್ಗ ಮನ ಸೋಲುತ್ತದೆ. ಅದಕ್ಕಾಗಿ ಭಾಮೆಯು ಧನ್ಯಳಾದೆನೆ ಕೊರವಿ ನಿನ್ನ ರೂಪವ ಕಂಡು ಎಂದು ಉದ್ಗರಿಸುವಳು. ಅಲ್ಲದೇ ನೀನಾವ ದೇಶದವಳು? ನಿನ್ನ ಪತಿಯಾರು? ಯಾವ ನಾಡಿನ ಕೊರವಿ ನೀನು? ಎಂದು ಕೇಳಿದಾಗ ಅವಳು ಕೊಡುವ ಉತ್ತರಗಳು ಅರಿವಿಗೆ ನಿಲುಕದ್ದಾಗಿದೆ." ಗಂಡ ನನಗಿಲ್ಲ. ಹೆಂಡಿರನಾಳುವೆ, ಗಂಡುಗಾದೇವಿ, ನಾರಾಯಣಿಯೆಂಬುವರು ನನಗೆ. ಅನೇಕ ದೇವ ದೈತ್ಯರಿಂದ ಪೂಜಿಸಲ್ಪಡುವ

ಕೊರವಂಜಿ ನಾನು? ಎನ್ನುವಳು. ಏಕೆಂದರೆ ದೇವಲೋಕದ ಕೊರವಿ ಅವಳು. ಬ್ರಹ್ಮಾಂಡವನ್ನೆ ಬುಟ್ಟಿಯನ್ನಾಗಿ ಮಾಡಿಕೊಂಡು, ಪರಮಾತ್ಮನನ್ನೆ ಮಗುವನ್ನಾಗಿ ಎತ್ತಿಕೊಂಡು ಕಣಿ ಹೇಳುವ ತ್ರಿಕಾಲ ಬ್ರಹ್ಮಜ್ಞಾನಿ ಅವಳು. ಅವಳಿಗೆ ತಿಳಿಯದ ವಿಷಯವೇ ಇಲ್ಲ. ವಿಶ್ವಜ್ಞಾನಿ, ಲೋಕಜ್ಞಾನಿ ಅವಳು. ಆದರೆ ತಿರಿಕೊಂಬ ಕೊರವಿ ತಾನಲ್ಲ ಎನ್ನುವಳು. ಆದ್ದರಿಂದ ಈ ಪಾತ್ರವು ಶ್ರೀಕೃಷ್ಣ ಪಾರಿಜಾತದ ಕೊನೆಯ ಭಾಗದಲ್ಲಿ ಬಂದು ಸೇರುವುದರಿಂದ ಕೊರವಿಯ ಪಾತ್ರಕ್ಕೆ ಮಹತ್ವ ಬಂದಿದೆ. ಈ ಪಾತ್ರ ಆಂಧ್ರಪ್ರದೇಶದಿಂದ ಪಾರಿಜಾತದಲ್ಲಿ ಬಂದು ಸೇರಿದೆ. ಆದ್ದರಿಂದ ಈ ಕೊರವಂಜಿ ರಂಗಭೂಮಿಗೆ ಬಂದಾಗಲೇ 'ಶ್ರೀಕೃಷ್ಣ ಪಾರಿಜಾತ ಕಥೆಯು' ಪರಕಾಷ್ಟತೆಯನ್ನು ತಲುಪುತ್ತದೆ. ಇಂಥ ಅದ್ಭುತ ಪಾತ್ರ ಸೃಷ್ಟಿ ಇರುವುದರಿಂದಲೇ ಪಾರಿಜಾತ ರಂಗಭೂಮಿ ಇಂದಿಗೂ ಸರ್ವಜನಾದರಣೀಯವಾಗಿದೆ.

ಈ ಪ್ರಕಾರವಾಗಿ ಜನಪದ ಬಯಲು ಕಲಾರಂಗಭೂಮಿಯ ಅನುಕರಣಾ ವಿಧಾನದಿಂದ ತನ್ನ ಸಂಪ್ರದಾಯವನ್ನು ಉಳಿಸಿಕೊಂಡು ಬಂದವು. ಗ್ರೀಕ್ ನಾಟಕಗಳು ಇದೇ ರೀತಿಯಾಗಿಯೇ ರೂಪ ಪಡೆದುಕೊಂಡು ಗ್ರೀಕರು ಪ್ರತಿವರ್ಷವೂ ಪೂಜಿಸುವ 'ಡಯೋನೀಸಸ್' ಎಂಬ ದೇವತೆಯ ಉತ್ಸವ ಸಮಯದಲ್ಲಿ ಭಕ್ತರು ಮೈ ಮರೆತು ಆವೇಶದಿಂದ ವೇಷಧರಿಸಿ ಕುಣಿಯುತ್ತಿದ್ದರಂತೆ. ಹೀಗೆ ಕುಣಿಯುವ ಕಾಲಕಳೆದಂತೆ ಮಾತು, ಹಾವಭಾವದ ಭಂಗಿಗಳು ಮತ್ತು ಇತರ ಪಾತ್ರಗಳ ಸಂಖ್ಯೆಗಳು ಬೆಳೆಯ ತೊಡಗಿದವು. ಅನಂತರ ತಾವು ಕಂಡ ದೃಶ್ಯ, ಸನ್ನಿವೇಶ, ಕಥೆ, ಹಾಡುಗಳು ಮೇಳವಿಸಿಕೊಂಡು ಮನರಂಜನೆ ನೀಡುವ ಪ್ರವೃತ್ತಿ ಬೆಳೆಸಿಕೊಂಡು ಬಂದು ಇಂದು ಶಾಸ್ತ್ರೀಯವಾಗಿ ಮತ್ತು ಜನಪದಿಯ ಎಲ್ಲ ಅಂಶಗಳನ್ನು ಉಳ್ಳ ಕಲೆಯಾಗಿ ಮಾರ್ಪಾಡಿದ ಸನ್ನಿವೇಶ ನೋಡುತ್ತೇವೆ.

ಶ್ರೀಕೃಷ್ಣ ಪಾರಿಜಾತದಲ್ಲಿಯ ರತಿ, ಶೃಂಗಾರ, ರಸಗಳು ನಾನಾ ಬಗೆಗಳನ್ನು ಕಾಣುತ್ತೇವೆ. ಅದರಂತೆ ಶೃಂಗಾರದಿಂದ ಭಕ್ತಿ ಹೆಚ್ಚಿ ಪಾರಮಾರ್ತ್ಯ ಪಡೆಯುತ್ತೇವೆ. ಇಲ್ಲಿಯ ಕಥಾ ವಸ್ತು ಜನಜೀವನಕ್ಕೆ ಅಂಟಿಕೊಂಡಿದೆ. ಹಾಲುಮಾರುವ ಹೆಣ್ಣುಗಳಿಗೆ ಕಚಗುಳಿ ಕೊಡುವ ಗೋಪಾಲರು, ಮತ್ತು ಶ್ರೀಕೃಷ್ಣ ರುಕ್ಮೀಣಿಯರ, ಮತ್ತು ಸತ್ಯಭಾಮೆಯರ ಕದನಗಳು ಮನೆಮನೆಗಳಲ್ಲಿ ನೋಡುತ್ತೇವೆ. ಹೀಗೆ ಜನ ಜೀವನಕ್ಕೆ ಹತ್ತಿರವಾದ ಕಥಾವಸ್ತು ಪಾರಿಜಾತದ ಶ್ರೀಕೃಷ್ಣ ರುಕ್ಮೀಣಿ, ಸತ್ಯಭಾಮೆ, ದೇವರಾದರು. ನಮ್ಮವರಂತೆ ಕಷ್ಟ-ಸುಖ, ಭಯ, ಭಕ್ತಿ ನಮ್ಮ ಭಾಳಿನಲ್ಲಿಯ ಕಥಾವಸ್ತುವಾಗಿ ನಿಲ್ಲುತ್ತವೆ. ಪಾರಿಜಾತದ ಪಾತ್ರಗಳೆಲ್ಲವು ನಮ್ಮ ಮನೆಯ ಪಾತ್ರಗಳಂತೆ ಗೋಚರಿಸುತ್ತವೆ. ಜೀವನದ ವಿವಿಧತೆಯನ್ನು ಚಿತ್ರಿಸಿಕೊಡಬಲ್ಲ ಬಯಲಾಟವೆಂದರೆ ಅದು ಶ್ರೀಕೃಷ್ಣ ಪಾರಿಜಾತವೆಂದೇ ಹೇಳಬಹುದು.

---

ಆಧಾರ : ಶ್ರೀಕೃಷ್ಣ ಪಾರಿಜಾತ ಒಂದು ಅಧ್ಯಯನ - ಡಾ॥ ಶ್ರೀರಾಮ ಇಟ್ಟಣ್ಣವರ

## ಅಧ್ಯಾಯ – ೨

# ಶ್ರೀಕೃಷ್ಣ ಪಾರಿಜಾತ ಮತ್ತು ಕೊರವಂಜಿ ಸನ್ನಿವೇಶ

ಕನ್ನಡ ಜನಪದ ಕಲಾವೈಭವವನ್ನು ಎತ್ತರಿಸಿದ ವಿವಿಧ ರಂಗಕಲೆಗಳಿಗೆ ಪರಂಪರೆ ಒದಗಿಸಿದ ಇಲ್ಲಿಯ ಜನತೆಯ ಭಕ್ತಿಭಾವ. ಈ ಭಕ್ತಿಭಾವಗಳಿಗೆ ಅನುಗುಣವಾಗಿ ಮೈತಾಳಿ ನಿಂತ ಅನೇಕ ನಾಟ್ಯ ರೂಪಗಳು ಇನ್ನು ಜೀವಂತವಾಗಿವೆ. ಜಾತ್ರೆ, ಉತ್ಸವ, ಹಬ್ಬ, ಹರಿದಿನಗಳಲ್ಲಿ ದೈವಿ ಭಕ್ತಿಯ ದ್ಯೂತಕವಾಗಿ ಸಮಾಜದ ಸಂತೋಷ ಪ್ರತಿಕವಾಗಿ ಬಡತನ ನಿವಾರಣೆಯ ಉಪಜೀವನ ವೃತ್ತಿಯಾಗಿ ವಿವಿಧ ರೂಪಗಳು ನಮ್ಮಲ್ಲಿ ಬೆಳೆದು ಬಂದಿವೆ. ಈ ಆಟ ನೋಟಗಳಲ್ಲಿ ನಮ್ಮಲ್ಲಿ ದೊರೆಯುವ ಬಯಲಾಟಗಳೇ ಮೂಲ ಎಂದು ಹೇಳಬೇಕು.

ಕರ್ನಾಟಕ ನೆರೆಯ ರಾಜ್ಯಗಳಾದ ಆಂದ್ರದ ತೆಲಗು, ತಮೀಳು ಮರಾಠಿ, ನಮ್ಮ ರಾಜ್ಯದ ಮಲೆನಾಡು ಮೈಸೂರು, ಕೊಡಗು ಮತ್ತು ಉತ್ತರ ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ಈ ಬಯಲು ರಂಗಕಲೆಗಳು ಬೆಳೆದು ಬಂದ ಬಗೆಗಳು ಬಹಳ ವೈವಿಧ್ಯಮಯವಾಗಿವೆಂದು ಹೇಳಬಹುದು.

ಶ್ರೀಕೃಷ್ಣ ಪಾರಿಜಾತ ಪರಂಪರೆ ಅಪರಾಳ ತಮ್ಮಣ್ಣನಿಂದ ಪ್ರಾರಂಭವಾಯಿತೆನ್ನವುದು ಕೂಡಾ ಸರಿಯಲ್ಲ. ಅವನಿಗಿಂತ ಪೂರ್ವದಲ್ಲಿ ಹಲವರು ಕೃಷ್ಣ ಪಾರಿಜಾತಗಳನ್ನು ರಚಿಸಿದ್ದಾರೆ ಎನ್ನುವುದಕ್ಕೆ ಈ ಎಲ್ಲ ಮಾಹಿತಿಗಳು ಗುರುತಿಸಬಹುದು. "ಭಾಮಾಕಥೆ, ಕೋರವಂಜಿ ಕಥೆಗಳು ನಮ್ಮಲ್ಲಿ ತಮಿಳನಾಡಿನಿಂದ ರಾಮಾನುಜಾಚಾರ್ಯರೊಡನೆಯೇ ಬಂದವು ಎಂದು ತೋರುತ್ತದೆ"[೧]. ೧೨ನೇ ಶತಮಾನದ ಚಿಕ್ಕದೇವರಾಯನ ಕಾಲದ ವೈಷ್ಣವ ಸಾಹಿತ್ಯ ಪ್ರಭಾವದಿಂದಲೇ ಇಂಥ ಕೃತಿಗಳ ಉಗಮಗೊಂಡವು. ವಿಜಯನಗರ ಅರಸರ ಕಾಲಕ್ಕೆ ತೆಲುಗರೊಡನೆ ಸಂಬಂಧಗಳ ಹೆಚ್ಚು ಬೆಸೆದುಕೊಂಡಿದ್ದರಿಂದ, ತೆಲುಗಿನಲ್ಲಿ ಜನಪ್ರೀಯವಾದ ಭಾಮಾಕಲಾಪ (ಕೂಚಿಮುಡಿ)ಗಳು ಕನ್ನಡನಾಡಿಗೆ ಧಾರಾಳವಾಗಿ ವಲಸೆ ಬಂದವು. ಕೊರವಂಜಿ ಪಾತ್ರಸೃಷ್ಟಿ ಕನ್ನಡ ನೆಲದಲ್ಲ. ಆಂದ್ರ ಮತ್ತು ತಮಿಳು ನಾಡಿನಿಂದಲೆ, ನಮ್ಮಲ್ಲಿಗೆ ಬಂದು ಪ್ರಸಿದ್ಧಿಯನ್ನು ಪಡೆಯಿತು.

ಅಪರಾಳ ತಮ್ಮಣ್ಣನಿಗೆ ಸ್ಪೂರ್ತಿ ನೀಡಿದೆಯೆಂದು ಹೇಳಲಾದ ಪ್ರಸನ್ನ ವೆಂಕಟದಾಸರ ಕಾಲ ೧೬೮೦ ರಿಂದ ೧೭೫೨ ರಲ್ಲಿ ಶ್ರೀಕೃಷ್ಣ ಪಾರಿಜಾತ ಅಥವಾ ಸತ್ಯಭಾಮಾ ವಿಲಾಸವು ಒಂದು ಲಘುಗೀತ ನಾಟಕವಾಗಿದೆ. ನಾರದ ಕೊರವಂಜಿ ಎಂಬ ಅವರ ಇನ್ನೊಂದು ಕೃತಿಯು ಗೀತನಾಟಕವಾಗಿದೆ.

೧. ಶ್ರೀಕೃಷ್ಣ ಪಾರಿಜಾತ : ಭೂಜೇಂದ್ರ ಮಹೀಶವಾಡಿ. ಪುಟಸಂಖ್ಯೆ : ೬೧

ಅದೇ ರೀತಿಯಾಗಿ ಈ ಕಾಲದಲ್ಲಿ ಅನೇಕ ಗೀತನಾಟಕಗಳು ರಚನೆಗೊಂಡವು. ಅವುಗಳಲ್ಲಿ ಹೆಳವನಕಟ್ಟೆ ಗಿರಿಯಮ್ಮನ (೧೭೫೦) ಬ್ರಹ್ಮಕೊರವಂಜಿ, ಮುಮ್ಮಡಿ ಕೃಷ್ಣರಾಜರ (೧೭೯೮-೧೮೬೮) ಭಾಮಾಕಥೆ ಮತ್ತು ಪ್ರಸನ್ನ ಕೃಷ್ಣ ಕೊರವಂಜಿ ಕಥೆ. ಚಂದ್ರಸಾರವರ್ಣೀಯ ೧೭೭೫-೧೮೭೦ ಮನ್ಮಥ ಕೊರವಂಜಿ, ವಸುದೇವ ಪಾರಿಜಾತ ಯಕ್ಷಗಾನಗಳ ರಾಯಣ್ಣನ (೧೭೨೦) ಪದ್ಮಾವತಿ ಕೊರವಂಜಿ, ಯಕ್ಷಗಾನ ಸಾಮಿಕವಿ (೧೭೫೦) ಬಿಳಿಯಕಲ್ಲ ರಂಗಸ್ವಾಮಿಯ ಪಾರಿಜಾತ ಯಕ್ಷಗಾನ ವೆಂಕಟನ (೧೮೦೦) ಪಾರ್ವತಿ ಕೊರವಂಜಿ, ಯಕ್ಷಗಾನ ಅನಂತನಾಥಕವೆಯ (೧೮೦೦) ಮನ್ಮಥ ಕೊರವಂಜಿ, ಯಕ್ಷಗಾನ ಮತ್ತು ಇಂಥ ಕವಿಗಳ ಗೊತ್ತಿಲ್ಲದ ಹೆಸರುಗಳು (೧೭೧೧) ಕರ್ನಾಟಕ ಕೊರವಂಜಿ ಸು. ೧೮೩೦ ರಲ್ಲಿ ರಚಿಸಿದ ಪ್ರಸನ್ನ ಕೃಷ್ಣ ಕೊರವಂಜಿ ನವಪಾರಿಜಾತ ಯಕ್ಷಗಾನ ೧೮೩೦ ರಲ್ಲಿ ಅಮ್ಮಣ್ಣಿ ಪಾರಿಜಾತ ಯಕ್ಷಗಾನ ಮೊದಲಾದ ಕೃತಿಗಳೆಲ್ಲವು ಅಪರಾಳ ತಮ್ಮಣ್ಣ ಕೃತಿಗಿಂತ ಮೊದಲೇ ರಚಿತವಾಗಿವೆ. ಈ ಕೃತಿಗಿಂತ ಪೂರ್ವದಲ್ಲಿ ಒಂದು ನೂರು ವರ್ಷದ ಪರಂಪರೆ ಶ್ರೀಕೃಷ್ಣ ಪಾರಿಜಾತಕ್ಕಿದೆ ಎಂದೇ ಹೇಳಬೇಕು.

### ೧) **ಅಪರಾಳ ತಮ್ಮಣ್ಣ :**

ಈ ಎಲ್ಲ ಪರಂಪರೆಯ ಅನುಗುಣವಾಗಿ ಕನ್ನಡ ಶ್ರೀಕೃಷ್ಣ ಪಾರಿಜಾತವು ಮೊಟ್ಟಮೊದಲು ಕಾಣಿಸಿಕೊಂಡಿದ್ದು ರಾಯಚೂರ ಜಿಲ್ಲೆಯ ಪುಣ್ಯಭೂಮಿಯಲ್ಲಿ 'ಶ್ರೀಕೃಷ್ಣ ಪಾರಿಜಾತ'ವು ಹೊಸ ರೂಪತಾಳಿತು. ರಾಯಚೂರಿನಿಂದ ೧೮ ಕಿ.ಮೀ. ದಲ್ಲಿಯ 'ಅಪರಾಳ' ಎಂಬ ಊರಿನಲ್ಲಿ ಭಕ್ತಿ ಸಂಪನ ಬ್ರಾಹ್ಮಣ ಕುಟುಂಬದಲ್ಲಿ ಶ್ರೀಕೃಷ್ಣ ಪಾರಿಜಾತದ ಜನಕರಾದ ಶ್ರೀ ತಮ್ಮಣ್ಣನವರು ಜನಿಸಿದರು. ಇವರ ಶಿಕ್ಷಣ-ಜೀವನ ವೃತ್ತಿ ಇವುಗಳ ಬಗ್ಗೆ ಮಾಹಿತಿ ಸಿಗುವುದಿಲ್ಲ. ಆದರೆ ಇವರು ಕನ್ನಡ-ಸಂಸ್ಕೃತ ಭಾಷೆಗಳಲ್ಲಿ ಪರಿಣಿತರಾಗಿದ್ದರು. ಅಂದಿನ ಕಾಲಕ್ಕೆ ಅನುಗುಣವಾಗಿ ಮಾಧ್ವ ತತ್ತ್ವಜ್ಞಾನದ ಅಭ್ಯಾಸವನ್ನು ಆಳವಾಗಿ ಮಾಡಿದ್ದರೆಂದು ತಿಳಿದುಬರುತ್ತದೆ. ಪುರಾಣ ಶಾಸ್ತ್ರಗಳ ಪರಿಚಯ ಚೆನ್ನಾಗಿ ಬಲ್ಲವರಿದ್ದರು. ಭಾಗವತ ಕವಿಗಳ, ದಾಸರ ಸಾಹಿತ್ಯದ ಅಭ್ಯಾಸ ಚೆನ್ನಾಗಿ ಮಾಡಿದ್ದರಿಂದ ಇವರಿಗೆ ಸಂಗೀತ, ನೃತ್ಯ ಅಭಿನವಗಳಲ್ಲಿ ಪ್ರಾವೀಣ್ಯತೆಯನ್ನು ಸಂಪಾದಿಸಿದ್ದರು. ಅಂದು ಕರ್ನಾಟಕ ಸಂಗೀತವು ಕರ್ನಾಟಕ ಪ್ರಾಂತದ ತುಂಬೆಲ್ಲ ವ್ಯಾಪಿಸಿತ್ತು. ಅದಕ್ಕಾಗಿಯೇ ಅವರು ಕರ್ನಾಟಕ ಸಂಗೀತ ಪದ್ಧತಿಯಲ್ಲಿ ಪರಿಣಿತಿ ಹೊಂದಿದ್ದರು. ಗೃಹಸ್ಥ ಜೀವನವನ್ನು ನಡೆಸುತ್ತ ಹವ್ಯಾಸಕ್ಕಾಗಿ ರಂಗಕಲೆಯನ್ನು ಮುಂದುವರಿಸಿದ್ದರು. ಇವರ ತುಂಬಿದ ಕುಟುಂಬ ಜೀವನ, ಪತ್ನಿ, ಪುತ್ರ, ಪುತ್ರಿ ಎಲ್ಲರಿದ್ದರು. ದೈವಭಕ್ತರಾದ ಇವರಿಗೆ ಒಂದು ದಿವಸ ಸ್ವಪ್ನದಲ್ಲಿ ದೈವ ಸಾಕ್ಷಾತ್ಕಾರವಾಗಿ ಶ್ರೀಕೃಷ್ಣ ಲೀಲೆಯನ್ನು ರಚಿಸುವ ಹಾಡಿ, ಕುಣಿದಾಡಿ ಭಕ್ತಿಯನ್ನು ಸಾರಿ ಹೇಳುವ ಕೃತಿ ರಚಿಸುವ ಆದೇಶ ದೊರೆಯಿತು. ಊರಲ್ಲಿ ಆಗಾಗ ನಡೆಯುತ್ತಿರುವ ಬಯಲಾಟಗಳಲ್ಲಿ ಕೆಲ ಋಷಿಮುನಿಗಳ ಪಾತ್ರ ಮಾಡುತ್ತಿದ್ದರು. ಆಟ, ನಾಟಕ ನೃತ್ಯಗಳಲ್ಲಿ ದಿವ್ಯ ಕಂಠ ಶ್ರೀಯುಳ್ಳ ಈ ಕಲಾವಿದ. ಆಟ ಆಡುವರಿಗೆ, ಹಾಡು, ನೃತ್ಯಗಳನ್ನು ಕಲಿಸಿ ಮಾಸ್ತರರಾಗಿ ಪ್ರಸಂಗ ಬಂದಾಗ ತಾವು ಅಭಿನಯಿಸುತ್ತಿರಬೇಕು. ಇವೆಲ್ಲ ಸುಪ್ತವಾದ ಪ್ರತಿಭಾಶಕ್ತಿಗಳ ಪ್ರೇರಣೆಯಿಂದ ಇವರಿಗೆ ಶ್ರೀಕೃಷ್ಣ ಲೀಲೆಯ ನಾಟಕ ರಚಿಸುವ ಉತ್ಕಟ ಪ್ರೇರಣೆಯಾಗಿರಬೇಕು. ಸುಮಾರು ಕ್ರಿ.ಶ. ೧೮೦೦ ರಲ್ಲಿ ಇವರು ಶ್ರೀಕೃಷ್ಣ ಪಾರಿಜಾತವೆಂಬ ಗೀತನಾಟಕವನ್ನು ರಚಿಸಿದರು. ಇವರ ಕಾವ್ಯ ಪ್ರತಿಭೆ,

ದೈವ ಭಕ್ತಿಗಳು ಅದನ್ನು 'ಮಹಾನಾಟಕ'ವಾಗುವಂತೆ ಪ್ರೇರಿಪಿಸಿತು. 'ಕರ್ನಾಟಕ ಸಂಗೀತದ' ದೇಶಿಯವುಗಳ ವಿವಿಧ ರಾಗಗಳಲ್ಲಿ ಅವರು ನಾಟಕ ರಚಿಸಿದರು. ಪಾರಿಜಾತದ ಪದಗಳಲ್ಲಿ ತಾಳ, ಲಯ, ಪದ್ಧತಿಯಲ್ಲಿ ಪರಾಕಾಷ್ಟತೆ ಮುಟ್ಟಿದೆ ಎಂದು ಹೇಳಬೇಕು.

ಶ್ರೀ ಅಪರಾಳ ತಮ್ಮಣ್ಣನವರು ದೈವ ಪ್ರೇರಣೆಯಿಂದ ಶ್ರೀಕೃಷ್ಣ ಪಾರಿಜಾತವನ್ನು ರಚಿಸಿ, ತಾನು ಆ ಆಟದಲ್ಲಿ ಅಭಿನಯಿಸಿ ಜನರಲ್ಲಿ ಧರ್ಮಭಾವವನ್ನು ಲೋಕ ನೀತಿಯನ್ನು ಜಾಗೃತಿಗೊಳಿಸಬೇಕೆಂದು ನಿಶ್ಚಯಿಸಿದರು. ಅವರು ತಮ್ಮ ಮಗನ ಸಹಕಾರದಿಂದ ಪಾರಿಜಾತವನ್ನು ರಂಗಭೂಮಿಗೆ ಅಳವಡಿಸಿಕೊಂಡು ಅಭಿನಯಿಸಿದರು. ಇದು ಕೆಲವೇ ದಿನಗಳಲ್ಲಿ ಲೋಕ ಪ್ರೀಯವಾಯಿತು. ಇದನ್ನು ಕಂಡು ಹೊಟ್ಟೆ ಕಿಚ್ಚು ಪಡುವ ಜನರು ಇವರ ವಿರುದ್ಧವಾಗಿ ಅಂದಿನ ಕಾಲದ ವ್ಯಾಸರಾಯ ಮಠದ ಸ್ವಾಮಿಗಳಾದ ಶ್ರೀ ವಿದ್ಯಾಪ್ರಸನ್ನ ತೀರ್ಥರಿಗೆ ತಮ್ಮಣ್ಣನು ಮತ್ತು ಅವನ ಮಗನು ಕೂಡಿ ನಾಟಕವಾಡಿ 'ಮದ್ವಮತದ ತತ್ವಜ್ಞಾನ' ಅಪಪ್ರಚಾರ ಮಾಡುತ್ತಿದ್ದಾರೆ ಎಂದು ದೂರಿತ್ತರು. ನಾಟಕವನ್ನಾಡುವದು ಧರ್ಮ ಸಮ್ಮತವಲ್ಲವೆಂಬ ಭಾವವು ಅಂದು ಧರ್ಮಭಾವದ ಜನಸಾಮಾನ್ಯರಲ್ಲಿ ಇತ್ತು. ಶ್ರೀ ತಮ್ಮಣ್ಣನವರು ವ್ಯಾಸರಾಯ ಮಠದ ಶಿಷ್ಯಪರಂಪರೆಗೆ ಸೇರಿದವರು. ಸ್ವಾಮಿಗಳು ವಿವರಗಳನ್ನರಿಯದೇ, ಹತ್ತಿರದ ಕೆಲವರ ಮಾತುಗಳ ಕೇಳಿ ಅಪರಾಳ ತಮ್ಮಣ್ಣನವರನ್ನು ಬಹಿಷ್ಕರಿಸಿದರಂತೆ, ಆಗ ಶ್ರೀ ತಮ್ಮಣ್ಣನವರು ಸ್ವಾಮಿಗಳ ಸನ್ನಿಧಿಗೆ ಬಂದು ನಾವು ಆಡುವ ಆಟವು ಮಧ್ವಮತದ ಯಾವ ತತ್ವಕ್ಕೂ ವಿರೋಧವಾಗಿಲ್ಲ. ಮಧ್ವಮತಕ್ಕೆ ಅನುಗುಣವಾಗಿದೆ. ತಾವು ಆಟವನ್ನು ನೋಡಿ ಕುಲಂಕುಷವಾಗಿ ವಿಚಾರಿಸಬೇಕು ಎಂದು ಪ್ರಾರ್ಥಿಸಿದರಂತೆ, ಸ್ವಾಮಿಗಳು ಒಪ್ಪಿದರು. ಸಂಪೂರ್ಣ ಶ್ರೀಕೃಷ್ಣ ಪಾರಿಜಾತ ನಾಟಕವನ್ನು ನೋಡಿ ಅವಲೋಕಿಸಿ, ಸಂತುಷ್ಟರಾಗಿ ಶ್ರೀ ತಮ್ಮಣ್ಣನವರನ್ನು ಕಲಾ ಪ್ರತಿಭೆಯನ್ನು, ಪಾಂಡಿತ್ಯವನ್ನು, ಗಾಯನವನ್ನು ಕಂಡು ಮೆಚ್ಚಿ ಅವರ ಮೇಲಿನ ಬಹಿಷ್ಕಾರವನ್ನು ಹಿಂದೆ ಪಡೆದರು. ಹಾಗೂ ಅವರಿಗೆ ಪ್ರಶಸ್ತಿ, ಪುರಸ್ಕಾರಗಳನ್ನು ನೀಡಿ ಸನ್ಮಾನಿಸಿದರಂತೆ, ಮುಂದೆ ನಿಸ್ಸಂಕೋಚವಾಗಿ ತನ್ನ ಪ್ರಯೋಗಗಳನ್ನು ಪಾರಿಜಾತ ಆಟಗಳು ಮಾಡುತ್ತ ಊರೂರು ಸಂಚಿರಿಸಿದರು.

ಅಪರಾಳ ತಮ್ಮಣ್ಣನ ಜನನ ಮತ್ತು ಕೃತಿರಚನೆಗಳ ಕಾಲವನ್ನು ವಿದ್ವಾಂಸರು ಹೀಗೆ ಅಭಿಪ್ರಾಯ ಪಡುತ್ತಾರೆ.

ಜನನ : ಸು. ೧೮೦೦[೧] ಮತ್ತು ಸು. ೧೮೧೩

ಕೃತಿರಚನೆ : ಸು. ೧೮೦೦[೨]

ಕೃತಿರಚನೆ : ಸು. ೧೮೩೦[೩]

ಈ ಎಲ್ಲ ಅಂಶಗಳನ್ನು ಅಲ್ಲಗೆಳೆಯುವಂತೆ ಹೊಸ ಅಂಶವನ್ನು ಡಾ॥ ಎಂ. ಎಂ. ಕಲಬುರ್ಗಿಯವರು ಬೆಳಕಿಗೆ ತಂದಿದ್ದಾರೆ. ಅವರಲ್ಲಿರುವ ಬಹು ಅಪರೂಪದ್ದಾದ ಶ್ರೀಕೃಷ್ಣ ಪಾರಿಜಾತದ ಹಸ್ತಪ್ರತಿಯು ಕೊನೆಯಲ್ಲಿ ಅದನ್ನು ಪ್ರತಿಮಾಡಿದ ವಿವರ ಹೀಗೆದೆ.

---

೧. ವೆಂಕಟೇಶ ಸಾಂಗಲಿ : ಸಿರಿಗನ್ನಡ ಗ್ರಂಥಕರ್ತರ ಚರಿತ್ರೆ ಕೋಶ : ಪುಟಸಂಖ್ಯೆ – ೩೩

೨. ಡಾ॥ ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ : ಪುಟಸಂಖ್ಯೆ – ೨೧೭

೩. ಆರ್. ನರಸಿಂಹಾಚಾರ : ಕರ್ನಾಟಕ ಕವಿಚರಿತ್ರೆ ಸಂ. III : ಪುಟಸಂಖ್ಯೆ – ೨೦೦

"ಸ್ವಸ್ತಿ ಶ್ರೀ ಜಯಾಭ್ಯುದಯ ನೃಪ ಶಾಲಿವಾಹನ ಶಕೆ ೧೭೨೯ ಪ್ರವದ್ಧಮಾನೆ ಪ್ರಭವನಾಮ ಸಂವತ್ಸರೇ ಉತ್ತರಾಯಣೆ ವಸಂತೃತಾ ಚೈತ್ರಮಾಸೇ ಕೃಷ್ಣ ಪಕ್ಷೇ ಆದ್ಯ ಪಂಚಮೇ ಭೋಮಸೋವೇಳಾಯಂ ಇದೌ ಪಾರಿಜಾತ ಪುಸ್ತಕಂ" ತಾಳೀಕೋಟಿ ಹೊಸಮುನಿ ಬಸಲಿಂಗಪ್ಪನ ದೌಹಿತ್ರ ಉಮಾಪತಿನಾಮಧೇಯೇನ ಪರೋಪಕಾರಾರ್ಥಂ ಲಿಖಿತಂ"[೪] ಈ ಹಿಂದೂ ಪಂಚಾಂಗದ ಕಾಲ ಕ್ರಿ.ಶ. ೧೮೦೭ ಎಂದಾಗುತ್ತದೆ. ಅಪರಾಳ ತಮ್ಮಣ್ಣನು ಅರ್ಧಕ್ಕೆ ನಿಲ್ಲಿಸಿದ ಶ್ರೀಕೃಷ್ಣ ಪಾರಿಜಾತವನ್ನು ಸಿರಗುಪ್ಪಿ ಸದಾಶಿವಯ್ಯನೆಂಬ ಕವಿ ಪೂರ್ತಿಗೊಳಿಸಿದ್ದಾನೆ.[೫]

ಈ ಉಭಯ ಕವಿ ಕೃತಿಯನ್ನು ಪ್ರತಿ ಮಾಡಿಕೊಂಡದ್ದು ೧೮೦೭ರಲ್ಲಿ ಅಪರಾಳ ತಮ್ಮಣ್ಣನ ಅದೇ ಕೃತಿ 'ಸಿರಗುಪ್ಪಿ ಸದಾಶಿವಯ್ಯನಿಂದ ಪೂರ್ತಿಗೊಳ್ಳಲು ಒಂದು ದಶಕವಾದರು ಬೇಕಾಗಿರಬಹುದು. ಆದ್ದರಿಂದ ಅಪರಾಳ ತಮ್ಮಣ್ಣನು ಕ್ರಿ.ಶ. ೧೭೬೦-೭೦ ಸುಮಾರಿಗೆ ಶ್ರೀಕೃಷ್ಣ ಪಾರಿಜಾತವನ್ನು ರಚಿಸಿರಬೇಕು. ಎಂದು ತಿಳಿಯುತ್ತದೆ.

ಶ್ರೀಕೃಷ್ಣ ಪಾರಿಜಾತವನ್ನು ಒಬ್ಬನೇ ರಚಿಸಿದನೇ ಎಂಬ ಸಂಶಯ ಪ್ರಚಾರದಲ್ಲಿದೆ. ತಮ್ಮಣ್ಣ ಪಾರಿಜಾತ ಬರೆಯುತ್ತಿದ್ದಾಗ ಒಂದು ತಪ್ಪು ಮಡಿದನಂತೆ "ಸತ್ಯಭಾಮೆಯ ಬಾಯಿಂದ ರುಕ್ಮಿಣಿಯನ್ನು 'ಹುರುಡನತೇಜಿಗೆ ಮುದಿಗತ್ತೆ'[೬] ಎಂದು ಬೈಯ್ಯಿಸಿದನು. ಅಂದಿನ ರಾತ್ರಿ ಶ್ರೀಕೃಷ್ಣನು ಕನಸಿನಲ್ಲಿ ಬಂದು 'ರುಕ್ಮಿಣಿ ಸಾಕ್ಷಾತ ಲಕ್ಷ್ಮೀ ಅವಳನ್ನು ಕತ್ತೆ ಎಂದು ಬೈಯ್ಯಿಸಿ ಅಪರಾಧ ಮಾಡಿರುವೆ. ಇನ್ನು ನೀನು ಮುಂದಿನ ಕೃತಿ ರಚಿಸಬೇಡ, ಒಂಭತ್ತು ದಿನಗಳಲ್ಲಿ ನಿನಗೆ ಕಷ್ಟಗಳು ಕಾಡುತ್ತವೆ ಎಂದು ಹೇಳಿದನಂತೆ. ಅದರಂತೆ ಅಪರಾಳ ತಮ್ಮಣ್ಣ ಅರ್ಧಕ್ಕೆ ನಿಲ್ಲಿಸಿದ. ಅವನ ಗೆಳೆಯ ಸಂಗಯ್ಯ ಸ್ವಾಮಿ ಎಂಬವನ್ನು ಮುಂದಿನ ಭಾಗವಾದ ಉತ್ತರಾರ್ಧದ ಕೊರವಂಜಿ ಸನ್ನಿವೇಷವನ್ನು ಸಂಗಯ್ಯ ಸ್ವಾಮಿಯ ರಚನೆ[೬] ಎಂದು ಡಾ॥ ಎಂ. ಎಂ. ಕಲಬುರ್ಗಿಯವರು ಸಂಗತಿಯನ್ನು ಬೆಳಕಿಗೆ ತಂದಿದ್ದಾರೆ. ಈ ಹಿಂದೆ ಉಲ್ಲೇಖಿಸಿರುವ ಡಾ॥ ಕಲಬುರ್ಗಿಯವರು ಸಂಗ್ರಹದಲ್ಲಿರುವ ಶ್ರೀಕೃಷ್ಣ ಪಾರಿಜಾತದ ಹಸ್ತಪ್ರತಿ ಉಭಯ ರಚನಾಕಾರರ ಬಗ್ಗೆ ಸ್ಪಷ್ಟ ತಿಳುವಳಿಕೆ ನೀಡಿದೆ. ಈ ಹಸ್ತಪ್ರತಿಯ ಆರಂಭ ಹೀಗಿದೆ.

**ಶ್ರೀಗುರು ವಿರೂಪಾಕ್ಷಲಿಂಗಾಯನಮಃ । ಶ್ರೀ ಗುರು ನುಣ್ಣೋರಳ**
**ಸಂಗಮೇಶ್ವರಾಯನಮಃ । ಶ್ರೀ ಗಣಾಧಿಪತಿಯೇ ನಮಃ ।**
**ರಾಯಚೂರು ಅಪರಾಳ ತಮ್ಮಣ್ಣನು ಮಾಡಿದ ಪಾರಿಜಾತ ಬರವು**
**ದಕ್ಕೆ ಶುಭಮಸ್ತು । ಶೋಭನಮಸ್ತು । ಆಯುರಾರೋಗ್ಯ ಐಶ್ವರ್ಯಮಸ್ತು[೭] ।**

ಮುಂದೆ ಅಪರಾಳ ತಮ್ಮಣ್ಣನ ಪಾರಿಜಾತ ಪ್ರಾರಂಭವಾಗಿ ಸುಮಾರು ಭಾಗ ಯಾವ ಅಡೆತಡೆ ಇಲ್ಲದೆ ಸಾಗಿದೆ. ಮುಂದೆ ಕೊರವಂಜಿ ಭಾಗದಲ್ಲಿ ಸತ್ಯಭಾಮೆಗೆ ಹೇಳುವ "ದುಂಡಿ ನಿನಗಂಡ ಚಂಡ ಪ್ರಚಂಡ" ಎಂಬ ಹಾಡು ಮುಗಿದ ಕೂಡಲೇ ಪ್ರತಿಕಾರ ಸೂಚನೆ ಈ ರೀತಿಯಾಗಿದೆ.

---

೪. ಕರ್ನಾಟಕ ಭಾರತಿ : ೯-೩ : ಪುಟಸಂಖ್ಯೆ – ೨೦, ೨೧.
೫. ಬಸವರಾಜ ಮಲಶೆಟ್ಟಿ : ಉತ್ತರ ಕರ್ನಾಟಕದ ಬಯಲಾಟಗಳು – ಭಾಗ ೬ : ಪುಟಸಂಖ್ಯೆ – ೧೫೨
೬. ಬಸವರಾಜ ಮಲಶೆಟ್ಟಿ : ಉತ್ತರ ಕರ್ನಾಟಕದ ಬಯಲಾಟಗಳು : ಪುಟಸಂಖ್ಯೆ – ೧೫೨.
೭ ಬಸವರಾಜ ಮಲಶೆಟ್ಟಿ : ಉತ್ತರ ಕರ್ನಾಟಕದ ಬಯಲಾಟಗಳು : ಪುಟಸಂಖ್ಯೆ – ೧೫೩.

“ಶ್ರೀ ಶ್ರೀ ಶ್ರೀ ಶ್ರೀ ಇತಿ ಅಪರಾತಾ ತಮಂಣಾ ಮಾಡಿದ ಪಾರಿಜಾತ
ಕೊರವಂಜಿ ಸಹ ಪದಗಳು ೪X೮ ಕಂ । ಗದ್ಯ೪ ಕಂ । ವಚನ ೧೨ ಕಂ ।
ಸೀಸಪದ್ಯ ೨೧ ಕಂ । ಯೇಕುನೋ ಜಮೆ ೪೯೫ ಕಂ । ಮಂಗಳ
ಮಹಾ ಶ್ರೀ ನುಣ್ಣೊರಳ ಸಂಗಮೇಶ್ವರಾಯ ನಮಃ । ವುಳಿದ ಅರಕೆ
ಸಿರಗುಪ್ಪಿ ಸದಶಿವಯ್ಯ ಮಾಡಿದ್ದು ಪ್ರಾರಂಭ ಮಸ್ತು । ಸಿದ್ಧಿರಸ್ತು”[೮]

ಇದು ಮುಗಿದ ಕೂಡಲೆ ‘ಅಂದಮಾತನು ಕೇಳಿ ನಲವಿಂದ ಮಾನಿನಿ । ತಂದ ಸ್ವರ್ಣಕಲಶಮದವ ಮಂದಹಾಸಿನಿ । ಎಂಬ ಹಾಡಿನೊಂದಿಗೆ ಕಥೆ ಪ್ರಾರಂಭವಾಗಿ, ಕೊನೆಯಲ್ಲಿ ಇತಿ ಅಪರಾಳ ತಮ್ಮಣ್ಣ ಕೃತಿ ಪಾರಿಜಾತ, ಶಿರಗುಪ್ಪಿ ಸದಾಶಿವಯ್ಯ ಕೃತಿ ಪಾರಿಜಾತದ್ವಯ ಕೃತಿ ಸಂಪೂರ್ಣಂ’[೯] ಎಂದು ಹೇಳಲಾಗಿದೆ. ಇದರಿಂದ ಶ್ರೀ ಕೃಷ್ಣ ಪಾರಿಜಾತವು ಉಭಯ ಕರ್ತೃತ್ವದ ಬಗ್ಗೆ ಯಾವ ಸಂಶಯವು ಉಳಿಯುವುದಿಲ್ಲ.



೮. ಕರ್ನಾಟಕ ಭಾರತಿ ಭಾಗ – ೯–೩. ಪುಟಸಂಖ್ಯೆ – ೧೯
೯. ಅದೇ ಪುಟಸಂಖ್ಯೆ – ೧೯.

## ಸಣ್ಣಾಟಗಳು (ರಂಗಭೂಮಿ)

- **ಪೌರಾಣಿಕ**
  - ವೈಷ್ಣವ ಸಂಪ್ರದಾಯ ಬಯಲಾಟ
    - ಶ್ರೀಕೃಷ್ಣ ಪಾರಿಜಾತ
    - ಶ್ರೀ ವೆಂಕಟೇಶ ಪಾರಿಜಾತ
    - ಶ್ರೀ ರಾಮಾಪಾರಿಜಾತ ದಶಾವತಾರಾಟಗಳು
    - ದಾಸರಾಟಗಳು
  - ಶೈವಆಟಗಳು
    - ಶಿವಪಾರಿಜಾತ
    - ಹೇಮರಡ್ಡಿ ಮಲ್ಲಮ್ಮ ಪಾರಿಜಾತ
    - ಶಿವಶರಣರ ಪಾರಿಜಾತ
- **ಚಾರಿತ್ರಿಕ**
  - ಐತಿಹಾಸಿಕ ಪ್ರಜ್ಞೆ
    - ೧) ಕಿತ್ತೂರ ಚೆನ್ನಮ್ಮ
    - ೨) ಬೆಳವಡಿಮಲ್ಲಮ್ಮ
    - ೩) ಸಂಗೋಳ್ಳಿ ರಾಯಣ್ಣ
    - ೪) ಕಟ್ಟೆಚೆನ್ನ
    - ೫) ಸಿಂಧೂರಲಕ್ಷ್ಮಣ
  - ಭಕ್ತಿ ಪ್ರಜ್ಞೆ
    - ೧) ಮಾಯಿಆಟ
    - ೨) ನಿಜಗುಣ ಶಿವಯೋಗಿ
    - ೩) ಕಬೀರದಾಸ
    - ೪) ಭಕ್ತಕುಂಬಾರ
    - ೫) ಹೇಮರಡ್ಡಿ ಮಲ್ಲಮ್ಮ
    - ೬) ನೆಲ್ಲಯನೆಂಬಕ್ಕಾ
- **ಸಾಮಾಜಿಕ**
  - ೧) ಸಂಗ್ಯಾಬಾಳ್ಯಾ
  - ೨) ಕಡ್ಲಿಮಡ್ಡಿ ಕಾಶಿಬಾಯಿ
  - ೩) ದುಂಡ್ಯಾಮೋಡಿನ
  - ೪) ಬಲವಂತ–ಬಸವಂತ
  - ೫) ಮಹಾಲಿಂಗಶೆಟ್ಟಿ
  - ೬) ಸಾಹುಕಾರ------

## ೨) ಕುಲಗೋಡ ತಮ್ಮಣ್ಣ :

ಶ್ರೀಕೃಷ್ಣ ಪಾರಿಜಾತವು ಈ ಮೊದಲು ಗೀತನಾಟಕವಾಗಿದ್ದನ್ನು ಇದನ್ನು ಶುದ್ಧ ಬಯಲಾಟವನ್ನಾಗಿ ರೂಪಿಸಿದ ಕೀರ್ತಿ ಕುಲಗೋಡ ತಮ್ಮಣ್ಣನಿಗೆ ಸಲ್ಲುತ್ತದೆ. ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಸಣ್ಣ ಊರು ಕುಲಗೋಡ. ಈ ಊರಿನ ಶ್ರೀಮಂತ ಚಿನಿವಾರ ಮನೆತನದಲ್ಲಿ ಜನಿಸಿದ. ವೃತ್ತಿಯಿಂದ ಬೆಳ್ಳಿ-ಬಂಗಾರದ ವ್ಯಾಪಾರಿಯಾಗಿದ್ದರೂ ಪ್ರವೃತ್ತಿಯಿಂದ ಹಾಡು, ಕುಣಿತದ ಕಡೆಗೆ ಒಲವು ಇತ್ತು. ಭಕ್ತಿ ಪರವಾದ ಹಾಡುಗಳನ್ನು ರಚಿಸಿ ತಾನೆ ಹಾಡಿಕೊಳ್ಳುವುದರಲ್ಲಿ ಅವನಿಗೆ ಒಂದು ತರದ ಸಂತೋಷವೇ ಇತ್ತು. ನಿತ್ಯದಲ್ಲಿ ಹಾಡಿ, ತಾನು ಆನಂದ ಪಡುವುದ ಜೊತೆಗೆ ಜನರನ್ನು ಆನಂದ ಪಡಿಸುತ್ತಿದ್ದ. ಅಂದಿನ ಮೂಲೆ ಮೂಲೆಗಳಲ್ಲಿ ಪ್ರದರ್ಶನಗೊಳ್ಳುತ್ತಿದ್ದ ಬಯಲಾಟಗಳನ್ನು ನೋಡುವ ಹವ್ಯಾಸಿ ಆಗಿದ್ದ ವ್ಯಾಪಾರಕ್ಕಾಗಿ ಕರಾವಳಿ ಪ್ರದೇಶಕ್ಕೆ ಹೋದಾಗ ಉತ್ತರ ಕನ್ನಡ ಜಿಲ್ಲೆಯಲ್ಲಿ ಆಡುತ್ತಿದ್ದ ಯಕ್ಷಗಾನ ಆಟಗಳನ್ನು ನೋಡಿ-ನೋಡಿ ಹರ್ಷಗೊಂಡಿದ್ದ. ಅವನಲ್ಲಿದ್ದ ಸಹಜ ಪ್ರತಿಭೆಗೆ ಅವಕಾಶ ದೊರಕಿತೋ ಏನೋ. ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತವನ್ನು ಬಯಲಾಟಕ್ಕೆ ತಿರುಗಿಸಿದ. ಅಷ್ಟೊತ್ತಿಗೆ ಅವನ ಚಿನಿವಾರ ವೃತ್ತಿಗೆ ಧಕ್ಕೆ ತಗಲಿ, ಅವನ ಮನೆತನ ಬಡತನಕ್ಕೆ ತುತ್ತಾಗಿತ್ತು. ಪಾರಿಜಾತ ಆಟವನ್ನೇ ಆಡಿ ಉಪಜೀವನ ಸಾಗಿಸಲು ಅವನು ಮುಂದಾದ. ಅವನ ಮನೆತನಕ್ಕೆ ಬಡತನ ಬಂದಿರಬಹುದು. ಆದರೆ ಕನ್ನಡ ಬಯಲಾಟಕ್ಕೆ ಬಂದ ಶ್ರೀಮಂತಿಕೆ ಮಾತ್ರ ಸಣ್ಣದಲ್ಲವೆಂದೇ ಹೇಳಬೇಕು.

ಬಯಲಾಟಗಳಲ್ಲಿ ಅನೇಕ ಪ್ರಕಾರಗಳಿದ್ದರೂ ಕುಲಗೋಡ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ತನ್ನದೇ ಆದ ಛಾಪು ಮೂಡಿಸಿದೆ. ಇದಕ್ಕೆ ಕಾರಣ ಕುಲಗೋಡ ಹನುಂತದೇವರು ತಮ್ಮಣ್ಣನ ಇಷ್ಟ ದೇವತೆ

**"ನೋಡಿರೋ ಬಲಭೀಮನ ದಯವಿದು"**

ಎಂಬ ಆಟದ ಆರಂಭದಲ್ಲಿ ಬರುವಗಣಸ್ತುತಿ ಇಂದ ತಿಳಿದುಬರುತ್ತದೆ. ಕುಲಗೋಡ ಪಾರಿಜಾತ ಕಥೆಯು ಅಪರಾಳ ತಮ್ಮಣ್ಣನ ಕಥೆಯು ವಿಭಿನ್ನ ರೂಪಗಳೆಂದು ತೋರುತ್ತದೆ. ಅನೇಕ ಕಡೆ ಬದಲಾವಣೆ ಹೊಂದಿದೆ. ಇದಕ್ಕೆ ಕಾರಣ ಕುಲಗೋಡ ತಮ್ಮಣ್ಣನ ಪ್ರತಿಭೆ, ಜೀವನಾನುಭವ ಕಾರಣ. ಆಟದ ಪ್ರಾರಂಭದಲ್ಲಿ ಗಣಸ್ತೂತಿ ಬಂದು ಸರಸಸಲ್ಲಾಪದಿಂದೊಡಗೂಡಿದೆ. ಈ ಸನ್ನಿವೇಷ ಹೃದಯಂಗಮವಾಗಿದೆ. ಗೋಪಾಲನ ಪ್ರವೇಶ, ಗೊಲ್ಲತಿಯ ಪ್ರವೇಶ ಗೋಪಾಲನು ಗೊಲ್ಲತಿಯರ ವಲ್ಲಭನೆಂದು ನಂಬಿಕೆಯಿದೆ. ಹಾಲುಮೊಸರು ಕದ್ದುಗೊಲ್ಲತಿಯರೊಡನೆ ರತಿಕೇಳಿಯಾಡುವದು. ಗೋಪಾಲನ ಸ್ವಭಾವ, ಈ ಸನ್ನಿವೇಷ ರಸಿಕರ ಮನವನ್ನು ಸೆರೆಹಿಡಿಯುವುದು. ಅನಂತರ ಕೃಷ್ಣರುಕ್ಮಿಣಿಯರ ಪ್ರೇಮಸಂಸಾರಕ್ಕೆ ಏಳೆದೊಯ್ಯುವ ನಾವೆಯಂತೆ ಹರಿದಾಡುತ್ತದೆ. ಇಲ್ಲಿ ರತಿ ಚೇಷ್ಟೆ, ಕುಚೇಷ್ಟೆ, ಮಿತಿಮಿರುವ ರೀತಿಯಲ್ಲಿ ಈ ದೃಶ್ಯ ರಚಿತವಾಗಿದೆ. ಗೊಲ್ಲತಿಯನ್ನು ಗೋಪಾಲ ಕೆಣಕುತ್ತಾನೆ. ಕಾಡಿಸಿ ಪೀಡಿಸಿ ಆನಂದ ಪಡುತ್ತಾನೆ. ದೇವದೇವನ ಪ್ರೇಮಕ್ಕೆ ಪಾತ್ರರಾದವರು ಕಾಮದ ಜ್ವಾಲೆಯಲ್ಲಿ ಬಿದ್ದು ನೊಂದು ಸುಚಿಯಾಗಬೇಕಾದದ್ದು ಅಗತ್ಯ. ಈ ಸನ್ನಿವೇಶದಲ್ಲಿ ಬರುವ ಹಾಡುಗಳು ಬಹುಮನೋಹರವಾಗಿವೆ.

ಪದ್ಯ ಅಡತಾಳ ಝಂಜಟರಾಗ

ಗೊಲ್ಲತಿ : ಗೋಪಾಲ ತಗಿ, ಕೈಯ, ಬಿಡೋಕೈ
ಮೊದಲೆ ಪುರುಷ ಭರದಿ ಬೆದರಿ ನಾನಂಜುವೆ
ಮದನ ಕಲಾಪಕ್ಕೆ ಕರೀತೀಯೋ ರಂಗಾ
ನಗೆಯಾಡಲು ಎದೆ ಬುಗಿಲೆಂಬುದು । ಮ್ಯ-ಗೋಪಾಲ

ಭಾಗವತ : ಅಪ್ಪಸೆರಗ ಬಿಡೋಃ । ಅಣ್ಣ ಸೆರಗ ಬಿಡೋಃ
(ಗೊಲ್ಲತಿ) ಅಪ್ಪಯ್ಯಾ ಸೆರಗ ಬಿಡೋಃ ......................

ಗೋಪಾಲ : ಅಪ್ಪನು ನಾನಲ್ಲ ಅಣ್ಣನು ನಾನಲ್ಲ
(ಗೊಲ್ಲ) ನಿಮ್ಮಪ್ಪನ ಅಳಿಯಃ ಕಾಣೆ
ನಿಮ್ಮಪ್ಪನ ಅಳಿಯಃ ಕಾಣೆ ಗೊಲ್ಲರ ಭಾವ.

ಭಾಗವತ : ಮಾವ ಸೆರಗಬಿಡೋ ಭಾವಸೆರಗ ಬಿಡೋ
(ಗೊಲ್ಲತಿ) ಮಾವಯ್ಯಾ ಸೆರಗಬಿಡೋ
ಮಾವಯ್ಯಾ ಸೆರಗ ಬಿಡೋ ಗೋಪಾಲ....

ಗೋಪಾಲ : ಮಾವನು ನಾಲ್ಲ ಭಾವನು ನಾನಲ್ಲ
ಮಾವನ ಮಗ ಕಾಣೆ ಗೊಲ್ಲರ ಭಾಮೆ. (೧)

ಕುಲಗೋಡ ತಮ್ಮಣ್ಣನು ಅನುಗೊಳಿಸಿದ ಪಾರಿಜಾತ ಆಟದಲ್ಲಿಯ ವಿಷಯ ಕ್ರಮವೆಂದರೆ ಮಂಗಳಾಚರಣ ಹಾಡುಗಳಾದ ಮೇಲೆ ಗಣಪತಿಯ ಪ್ರವೇಶ, ಸೂತ್ರಧಾರನು ಗಣಪತಿಯಿಂದ ನಿರ್ವಿಘ್ನತೆಯ ವರ ಪಡೆದ ಮೇಲೆ ಗಣಪತಿಯ ಬಳಿಕ ಗೊಲ್ಲತಿ-ಗೋಪಾಲರ ಪ್ರಣಯ ಲೀಲಾ ಪ್ರಸಂಗ, ಇದಾದ ಮೇಲೆ 'ಶ್ರೀಕೃಷ್ಣ ಪಾರಿಜಾತ' ಪ್ರಸಂಗ, ಸತ್ಯಭಾಮೆಯ ಸಾಪತ್ನ ಭಾವದ ವಿವಿಧ ಮುಖಗಳ ದರ್ಶನ. ತರುವಾಯ ಅವಳ ವಿರಹಾವಸ್ಥೆಯ ಪ್ರದರ್ಶನ, ಹಾಗೂ ಪ್ರತಿಜ್ಞೆ, ಅನಂತರ ಕೊರವಂಜಿಯ ಭಾಗ, ಆಮೇಲೆ ನಾಯಕ-ನಾಯಿಕೆಯರ ಮಧುರ ಸಂಗಮದಲ್ಲಿ ಬಯಲಾಟವು ಮಂಗಲವಾಗುತ್ತದೆ.

ಕುಲಗೋಡ ತಮ್ಮಣ್ಣನ ಪಾರಿಜಾತ ಆಟವು ಯೋಗ್ಯವಾದ ನಟವರ್ಗದೊಂದಿಗೆ ರಂಗದ ಮೇಲೆ ಬಂದು ಸರ್ವಜನ ರಂಜಕವಾಗಿ ಜನ ಮೆಚ್ಚಿಗೆಯನ್ನು ಪಡೆಯಿತು. ತಮ್ಮಣ್ಣನೆ ಭಾಗವತ

---

೧. ಆಧಾರ ೧ : ಜಾನಪದ ರಂಗಭೂಮಿ : ಪುಟಸಂಖ್ಯೆ - ೯೨.

ಹುಕ್ಕೇರಿ ಸಿದ್ರಾಮಪ್ಪ, ಕೌಜಲಗಿ ನಿಂಗಾಸಾನಿ, ಸತ್ತಿಗೇರಿ ರುದ್ರಯ್ಯ ಮೊದಲಾದ ಸಂಗೀತ-ಲಯಕಾರರು ಪಾತ್ರಧಾರಿಗಳು. ಆನಂತರದಲ್ಲಿ ಕುಲಗೋಡ ತಮ್ಮಣ್ಣ ದಿವಂಗತನಾದ ಮೇಲೆ ಆತನ ಮೇಳದಲ್ಲಿ ಪ್ರಮುಖನಾದ ಹುಕ್ಕೇರಿ ಸಿದ್ದರಾಮಪ್ಪ ತನ್ನದೇ ಆದ ಪಾರಿಜಾತವನ್ನು ಕಟ್ಟಿದನು. ಕೌಜಲಗಿ ನಿಂಗವ್ವ ಉಳಿದ ಕೆಲವು ನಟರೊಂದಿಗೆ ಮೂಲಮೇಳವನ್ನೆ ಮುಂದುವರೆಸಿಕೊಂಡು ಬಂದಳು. ಸಿದ್ದರಾಮಪ್ಪನ ಮೇಳದಲ್ಲಿ ಬಡಕುಂದರಿಗಿ ಬಸಪ್ಪ ಎಂಬ ಸ್ತ್ರೀಪಾತ್ರಧಾರಿ ನಟನು ತುಂಬ ಪ್ರಸಿದ್ಧಿಯನ್ನು ಪಡೆದವನು. ಈ ಎರಡು ಕಲಾಮೇಳಗಳು ಉತ್ತರಕರ್ನಾಟಕದ ತುಂಬ ಶ್ರೀಕೃಷ್ಣ ಪಾರಿಜಾತ ಆಟವನ್ನು ಪ್ರಸಿದ್ಧ ಪಡೆಯುವಂತೆ ಮಾಡಿದಲ್ಲದೇ ಇವರು ಹಾಡುತ್ತಿದ್ದ ಕೆಲವು ಪಾರಿಜಾತದ ಹಾಡುಗಳು ಮಹಾರಾಷ್ಟ್ರದ ಮೊದಲ ನಾಟಕಕಾರರಾದ ದಿವಂಗತ ಅಣ್ಣಾ ಕಿರ್ಲೋಸ್ಕಾರ ಅವರ ನಾಟಕ ಗೀತೆಗಳಿಗೆ ಧಾಟಿಯನ್ನು ಒದಗಿಸಿದವು.[೧]

ಒಟ್ಟಿನಲ್ಲಿ ಹೇಳುವುದಾದರೆ ಅಪರಾಳ ತಮ್ಮಣ್ಣನ ಗೀತ ಕಾವ್ಯವು ಕುಲಗೋಡ ತಮ್ಮಣ್ಣನಿಂದ ರಂಗಭೂಮಿಗೆ ಬಂದು ತನ್ನ ಸಾಹಿತ್ಯಿಕ-ಸೌಂದರ್ಯ-ಗುಣವಿಶೇಷಗಳಿಂದ ರಸಿಕರಿಗೆಲ್ಲ ತಲೆದೂಗುವಂತೆ ಮಾಡಿತು.

ಅದರಂತೆ ಕೃಷ್ಣಾ ತೀರದ ಶೂರಪಾಲಿ ಎಂಬ ಗ್ರಾಮದಲ್ಲಿ ಅಚ್ಯುತಾಚಾರ್ಯ ಎಂಬುವನು ತನ್ನದೊಂದು ಪಾರಿಜಾತ ಮೇಳವನ್ನು ಕಟ್ಟಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದ್ದನು.

## ೩) ಕೌಜಲಗಿ ನಿಂಗವ್ವ :

ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕೌಜಲಗಿ ಗ್ರಾಮದವಳು. ಇವಳು ಡೊಂಬರ ಜಾತಿಗೆ ಸೇರಿದ ಹೆಣ್ಣು ಮಗಳು. ಮೂಲತಃ ಡೊಂಬರು ಊರಿಂದೂರಿಗೆ ಅಲೆಮಾರಿಗಳಾಗಿ ಅನೇಕ ಸರ್ಕಸ್ಸಿನ ಕಲೆಯನ್ನು ತೋರಿಸುತ್ತ ತಮ್ಮ ಉಪಜೀವನ ನಡೆಸಿಕೊಂಡು ಬರುವ ಬುಡಕಟ್ಟು ಜನಾಂಗದವರು. ಈ ಜನಾಂಗದಲ್ಲಿ ಹುಟ್ಟಿದ ನಿಂಗವ್ವ ಅನೇಕ ಹೆಸರುಗಳಿಂದ ಹೆಸರುವಾಸಿಯಾಗಿದ್ದಳು. ಇದಕ್ಕೆ ಕಾರಣ ಶ್ರೀಕೃಷ್ಣ ಪಾರಿಜಾತ ಆಟವೆಂದೆ ಹೇಳಬೇಕಾಗುತ್ತದೆ. ನಿಂಗವ್ವ ಚಿಕ್ಕವಳಿರುವಾಗ ಇವಳ ತಾಯಿ ಆಸೆಯಂತೆ ಯಾದವಾಡದ ಮಲಕಪ್ಪನನ್ನು ಗುರುವೆಂದು ಸ್ವೀಕರಿಸಿದ ಈಕೆ ಹೇಳಿಕೊಳ್ಳುವಷ್ಟು ರೂಪವಂತಿಯು ಆಗಿರಲಿಲ್ಲ. "ಓದು ಬರಹದ ಕಲಿತ ಬಗ್ಗೆ ವಾದವಿವಾಧಗಳು ಇವೆ. ಆದರೆ ದಿಟ್ಟ ಮಹಿಳೆ ಎಂದು ನಣದಿ ರಾಮಣ್ಣನವರು ಹೇಳುತ್ತಾರೆ".[೨] ಆದರೆ ಕನ್ನಡ ಬರೆದು ಬಯಲಾಟದ ಮಾತುಗಳು ಸಾವಂತರಿಗೆ ಕಲಿಸಿದವಳು ಇವಳೆ. ಇವಳಿಗೆ ಮರಾಠಿ ಬರುತ್ತಿತ್ತು. ಅಲ್ಲದೆ ಸಂಸ್ಕೃತ ಶ್ಲೋಕಗಳನ್ನು ಲಿಲಾಜಾಲವಾಗಿ ಹೇಳುತ್ತಿದ್ದಳು. ಹೀಗೆ ಆಕೆಯ ವಿದ್ಯಾಭ್ಯಾಸದ ಬಗ್ಗೆ ವಾವಿವಾಧಗಳು ಇವೆ.

---

೧. ಕನ್ನಡ ಜಾನಪದ ಸಾಹಿತ್ಯ : ಪುಟಸಂಖ್ಯೆ – ೯೮.
೨. ಕನ್ನಡ ಜಾನಪದ ಸಾಹಿತ್ಯ : ಪುಟಸಂಖ್ಯೆ – ೯೮.

ಬೆಳಗಾವಿ ವಕೀಲರೊಬ್ಬರು ಇವಳ ರೂಪ, ಹಾಡು ನೋಡಿ ಮೆಚ್ಚಿಕೊಂಡು ಇವಳನ್ನು ಮದುವೆಯಾದರು. ಅಷ್ಟೇ ಅಲ್ಲ, ಅವಳಿಗೆ ಹಾಡು ಕಲಿಸುವುದು ಸಂಭಾಷಣೆಯ ಶೈಲಿ ಹೇಳುವುದು ಮಾಡುತ್ತಿದ್ದರು. ಆದರೆ ಈ ಸಂಬಂಧ ಕೆಲವೆ ದಿನಗಳಲ್ಲಿ ಕಡಿದುಹೋಯಿತು. ಈ ಸಂಬಂಧ ಕಡಿದುಕೊಂಡದ್ದಕ್ಕೆ ಯಾವ ಕಾರಣವೇನು ಗೊತ್ತಿಲ್ಲಾ. ನಿಂಗವ್ವ ಬೆಳಗಾವಿಯಿಂದ ಹಿಂದುರಿಗಿದ ಮೇಲೆ ಬ್ರಹ್ಮಚಾರಿಣಿಯಾಗಿಯೇ ಉಳಿದದ್ದು ಮಾತ್ರ ಸತ್ಯ. 'ಯಾದವಾಡ ಮಲಕಪ್ಪನಲ್ಲಿ ಸಂಗೀತ ಕಲಿತು, ಕುಲಗೋಡ ತಮ್ಮಣ್ಣನ ಕಂಪನಿಯಲ್ಲಿ ಪಾತ್ರವಹಿಸಿ ತರುವಾಯ ತನ್ನದೇ ಆದ ಒಂದು ಕಂಪನಿ ಕಟ್ಟಿದ ನಿಂಗವ್ವನ ಬದಕು ಕಲಾ ಸೇವೆ ಮಾಡಿರುವುದು ಪಾರಿಜಾತದಲ್ಲಿ ದೊಡ್ಡ ಅಧ್ಯಾಯವೆಂದೆ ಹೇಳಬೇಕು. ಏಕೆಂದರೆ ನಿಂಗವ್ವನ ಪಾತ್ರವೆಂದರೆ ಕಲಾ ಆರಾಧಕರು ತನ್ಮಯತೆಯಿಂದ ಆಕೆಯನ್ನು ಆರಾದಿಸುತ್ತಾರೆ. ನಿಂಗವ್ವನ ಕಲಾಪ್ರೀತಿ ಬಹಳ ದೊಡ್ಡದು. ಏಕೆಂದರೆ ಅಂದಿನ ಜನಪದ ರಂಗಕಲೆಗಳಲ್ಲಿ ಸ್ತ್ರೀ ಕಲಾವಿಧರು ಪಾತ್ರವಹಿಸುವುದು ನಿಷೇಧವೆನ್ನುವಷ್ಟು ಅಂದಿನ ಕಾಲವಾಗಿತ್ತು. ಆಗ ನಿಂಗವ್ವ ಸ್ತ್ರೀ ಕಲಾವಿದೆ ಎಂಬುದರಿಂದ ನಿಂಗವ್ವನ ಕಾಲದಲ್ಲಿ ಹೆಣ್ಣು ರಂಗಭೂಮಿ ಮೇಲೆ ಒಂದು ವಿಶೇಷವೆನಿಸಿತ್ತು. ಹೀಗಾಗಿ ಉತ್ತರ ಕರ್ನಾಟಕದ ಎಲ್ಲ ಕಡೆ ಹಳ್ಳಿ-ಹಳ್ಳಿಗೂ ನಿಂಗವ್ವನ ಕೀರ್ತಿ ಪಸರಿಸಿತು. ಎಷ್ಟೋ ಜನ ಅವಳನ್ನು ನೋಡುವ ಕುತೂಹಲದಿಂದ ತಂಡೋಪ ತಂಡವಾಗಿ ಪಾರಿಜಾತ ನೋಡಲು ಬರುತ್ತಿದ್ದರು. ಅಲ್ಲದೇ ನಿಂಗವ್ವನ ಶ್ರೀಕೃಷ್ಣ ಪಾರಿಜಾತದ ಕಂಪನಿ ಕಟ್ಟಿದ ಮೇಲ ಮೊಟ್ಟ ಮೊದಲ ಕಂಪನಿಯ ಒಡತಿಯಾಗಿದ್ದಳು. ಇಂಥ ಕಲಾವಿದೆಯಾದ ಇವಳಿಗೆ ಕುಡಿತದ ಚಟವಿತ್ತು. ಅದರಂತೆಯೆ ಇನ್ನೊಂದು ಪ್ರಮುಖ ಗುಣವೆಂದರೆ ಬಡವರಿಗೆ ಸಹಾಯ ಮಾಡುವ ದೊಡ್ಡ ಗುಣ ಇವಳದಾಗಿತ್ತು. ನಿಂಗವ್ವನ ಕುಡಿತದ ಚಟವನ್ನು ಕುರಿತಾಗಿ ನಣದಿ ರಾಮಣ್ಣ ತುಂಬ ವಿಷಾದದಿಂದ ಮಾತನಾಡುತ್ತಾರೆ. ನಿಂಗವ್ವ ಹಿರಿಯಳು ಎಂಬುದರಿಂದ ಅವಳಿಗೆ ಅವ್ವ ಎಂದೇ ಸಂಬೋಧಿಸುತ್ತಿದ್ದರು. ಅವಳು ಮುಂಜಾನೆ ಸೆರೆ, ಸಾಯಂಕಾಲ ಸಿಂದಿ ಕುಡಿಯುತ್ತಿದ್ದನ್ನು ಕಂಡು ಅವಳ ಕಂಪನಿಯಲ್ಲಿದ್ದವರು ಒಬ್ಬಬ್ಬರಾಗಿ ದೂರಸರಿದರೆಂದು ಹೇಳುತ್ತಾರೆ.

ಹೀಗಾಗಿ ಇವಳು ಏಕಾಂಗಿಯಾಗಿ ಕಲಾಮೇಳದಿಂದ ದೂರ ಉಳಿದು ಕೊಂಡಳೆಂದು ಹೇಳಬಹುದು. ಆಕೆ ಶ್ರೀಕೃಷ್ಣ ಪಾರಿಜಾತದಲ್ಲಿ ಸತ್ಯಭಾಮೆಯ ಪಾತ್ರ ಮಾಡುತ್ತಿದ್ದಳು. ಪಾತ್ರ ಮಾಡುವುದು ನಿಲ್ಲಸಿದ ಮೇಲೂ ಆಕೆಯ ಬೆನ್ನಬಾಗಿದರೂ ಹಿಮ್ಮೇಳದಲ್ಲಿ ನಿಂತು ತಾಳ ಹಿಡಿಯುತ್ತಿದ್ದಳೆಂದರೆ ಅವಳ ಕಲಾಪ್ರೀತಿ ರಂಗಭಕ್ತಿ ಸ್ವಯಂ ವೇದ್ಯವಾಗುತ್ತದೆ.

---

ಆಧಾರ :

೧. ಶ್ರೀಕೃಷ್ಣ ಪಾರಿಜಾತ : ಒಂದು ಅಧ್ಯಯನ : ಡಾ|| ಶ್ರೀರಾಮು ಇಟ್ಟನ್ನವರ : ಪುಟಸಂಖ್ಯೆ - ೩೩೦.

## ೪) ಜಮಖಂಡಿ ಅಪ್ಪಾಲಾಲ್ :

**'ಹಸಿವು ಜೀವನಕ್ಕೆ ಪಾಠ ಕಲಿಸುತ್ತದೆ'** ಎಂಬ ಮಾತಿನಂತೆ ಬಡತನ ಬಾಳು ಹಲವು ಕಷ್ಟ ಸುಖಗಳ ಪರಿಪಾಠವಾಗುತ್ತದೆ. ಎಂಬಂತೆ ಕಡುಬಡತನದ ಕುಟುಂಬದಲ್ಲಿ ಕಲಾಕೇಸರಿ ಹುಟ್ಟಿದ್ದು ಅಪರೂಪವೇ ಎನ್ನುವಂತೆ ಇಂದಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ನಿಂಗನೂರಿನಲ್ಲಿ ಸಾಹೇಬಲಾಲ ನಧಾಫ ಮತ್ತು ಚಾಂದಮಾ ದಂಪತಿಗಳ ಉದರದಲ್ಲಿ ಅಪ್ಪಾಲಾಲರು ಜನಿಸಿದರು. 'ಬೆಳೆಯುವ ಸಿರಿ ಮೊಳಕೆ'ಯಲ್ಲಿ ಎನ್ನುವಂತೆ ಅಪ್ಪಾಲಾಲರಿಗೆ ಈ ತಾಲೂಕಿನ ಪರಿಸರದಲ್ಲಿ ಬೆಳೆದು ಬಂದ ಅನೇಕ ಕಲೆಗಳು ಹಾಗೂ ಕ್ರೀಡೆಗಳು ಇವರ ಮೇಲೆ ತನ್ನದೇ ಆದ ಛಾಪ ಒತ್ತಿದ್ದವು. ಕಲೆಗೆ ಯಾವುದೇ ಬಡತನ-ಸಿರಿತನ, ಜಾತಿ-ಧರ್ಮ, ಮೇಲು-ಕೀಳು ಎಂಬ ಭಾವ ಅದಕ್ಕಿಲ್ಲ ಎನ್ನುವಂತೆ ಹಲವಾರು ಸಂಕಷ್ಟಗಳ ತಿರುಗುಣಿ ಮಡುವಿನಲ್ಲಿ ಈಜಿದವರು. ಕಡು ಬಡತನದ ಅನೇಕ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಿ ಮುನ್ನುಗ್ಗುವ ಅವರ ಧೈರ್ಯ, ಅಪ್ಪಾಲಾಲರ ವಯಸ್ಸಿಗೆ ಮೀರಿದ್ದಾಗಿದೆ. ಏಕೆಂದರೆ ಸಾಹೇಬಲಾಲರನ್ನು ಇವರು ಚಿಕ್ಕವರಿದ್ದಾಗಲೆ ಕಳೆದುಕೊಂಡಿದ್ದರು. ತಾಯಿ ಚಾಂದಮಾ ಪರಿಸ್ಥಿತಿಯನ್ನೆದುರಿಸಿ ಮಕ್ಕಳಾದ ಅಪ್ಪಾಲಾಲ ಅಣ್ಣಾ ಹಾಜೀ ಸಾಬ್ ಉಳಿದ ಹೆಣ್ಣು ಮಕ್ಕಳನ್ನು ಅತ್ಯಂತ ಪ್ರೀತಿಯಿಂದ ಬೆಳೆಸಿದರು. ಅಪ್ಪಾಲಾಲರ ಮೇಲೆ ತಾಯಿಯ ಅಪಾರವಾದ ಪ್ರೀತಿಯಧಾರೆ ಹರಿಯುತ್ತಿತ್ತು. ಅದಕ್ಕೆ ಕಾರಣ ನಿಂಗನೂರಿನಿಂದ ಜಮಖಂಡಿಗೆ ಬಂದ ಮೇಲೆ ಅವರ ಶಿಕ್ಷಣ ಪ್ರಾರಂಭವಾಯಿತು. ಜಮಖಂಡಿಯ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಒಂದನೇಯ ತರಗತಿಯಿಂದ ನಾಲ್ಕನೇಯ ತರಗತಿಯವರೆಗೆ ಶಿಕ್ಷಣವನ್ನು ಪಡೆದರು. ಆದರೆ ಇದೇ ಸಂದರ್ಭದಲ್ಲಿ ತಾಯಿಯವರ ಶಕ್ತಿ ಕ್ಷಿಣಿಸುತ್ತ ಬರುತ್ತಿತ್ತು. ಬಾಲಕನಾದ ಅಪ್ಪಾಲಾಲನಿಗೆ ಜಮಖಂಡಿಯ ಪರಿಸರದಲ್ಲಿಯ ಅನೇಕ ಬಯಲಾಟಗಳ ಪ್ರಭಾವ ಈ ಬಾಲಕನ ಮನಸ್ಸನ್ನು ಸೆಳೆದುಕೊಂಡವು. ದೊಡ್ಡಾಟ ಸಣ್ಣಾಟ, ರಾಧಾನಾಟ ಮತ್ತು ಶ್ರೀಕೃಷ್ಣ ಪಾರಿಜಾತ ಆಟಗಳು ಈ ಪರಿಸರದಲ್ಲಿಯ ಹಳ್ಳಿ ಹಳ್ಳಿಗಳಲ್ಲಿ ಜರುಗುವ ಓಕಳಿ, ಜಾತ್ರೆ, ಉತ್ಸವ ಬಯಲಾಟಗಳಲ್ಲಿಯೇ ಅತಿ ಜನಪ್ರೀಯವಾದ ಶ್ರೀಕೃಷ್ಣ ಪಾರಿಜಾತದ ಪ್ರಭಾವವು ಅಪ್ಪಾಲಾಲರ ಮೇಲೆ ಸಾಕಷ್ಟು ಬಿರತೊಡಗಿತು. ಈ ಕಾರಣಕ್ಕೆ ಅಪ್ಪಾರಲಾಲರು ತನ್ನ ಶಿಕ್ಷಣವನ್ನು ಅಲ್ಲಿಯೇ ನಿಲ್ಲಿಸಿ, ಜನಪದ ರಂಗಭೂಮಿಯ ಕಲಾ ಆರಾಧಕರಾಗಿ ಆ ನಿಟ್ಟಿನಲ್ಲಿ ನಿದ್ದೆ-ಹಸಿವು ಇವುಗಳ ಪರಿವಿಲ್ಲದೇ ಶ್ರೀಕೃಷ್ಣ ಪಾರಿಜಾತ ಆಟವನ್ನು ನೋಡುವುದು ಎಂದು ಮರೆಯುತ್ತಿರಲಿಲ್ಲಾ.

ಅಪ್ಪಾಲಾಲರು ತಮ್ಮ ಹತ್ತು-ಹನ್ನೊಂದನೆ ವಯಸ್ಸಿನಲ್ಲಿ ಶ್ರೀಕೃಷ್ಣ ಪಾರಿಜಾತದಲ್ಲಿ ಗೌಳಗಿತ್ತಿ ಪಾತ್ರ ಮಾಡಿ ಜನಮನ ಗೆದ್ದರು. ಇವರಿಗೆ ನಾವಲಗಿಯ ಶೆಟ್ಟೆಪ್ಪನವರ ಪ್ರೀತಿ ವಿಶ್ವಾಸದಿಂದ ಮುಂದೆ ಸತ್ಯಭಾಮೆ ಮತ್ತು ಕೊರವಂಜಿ ಪಾತ್ರಗಳು ಕೂಡಾ ಬಹಳ ಎಸ್ಸೆಸನ್ನು ತಂದು ಕೊಟ್ಟವು. ಆನಂತರದಲ್ಲಿ ಮಲ್ಲಯ್ಯ ಸ್ವಾಮಿ, ಚಂಪಾಬಾಯಿ ಸುಳೆ, ಹಾಜೀಸಾಹೇಬ, ಸತ್ಯಪ್ಪ ಚಿಗರಿ, ಬರಗಿ ರಾಚಯ್ಯ ಸ್ವಾಮಿ ಮತ್ತು ಸಂಗಪ್ಪ ಹಿಪ್ಪರಗಿ, ಸಿದ್ದಪ್ಪ ಹೂಗಾರ ಈ ಎಲ್ಲ ಕಲಾವಿಧರೆಲ್ಲರು ಕೂಡಿಕೊಂಡು ಪಾರಿಜಾತ ಕಂಪನಿಯ ಕಟ್ಟಿದ್ದರು. ಆನಂತರ ಉತ್ತರ ಕರ್ನಾಟಕದ ತುಂಬ ತಮ್ಮ ಶ್ರೀಕೃಷ್ಣ ಪಾರಿಜಾತದ ಪ್ರದರ್ಶನಗಳು ನೀಡಿ, ಜನ-ಮನ ತಣಿಸಿದರು. ಇದಕ್ಕೆ ಕಾರಣ ಇವರ ಬಯಲಾಟದಲ್ಲಿ ಸಂಗೀತಕ್ಕೆ ಹೆಚ್ಚಿನ

ಪ್ರಾಧಾನ್ಯತೆಯನ್ನು ಕೊಟ್ಟಿದ್ದರು. ಅಪ್ಪಾಲಾಲರು ರಾಗಗಳಲ್ಲಿ – ಬೈರವಿ, ಜಂಜುಟಿ, ಮೂಲಕಾಂಸ, ಕಲ್ಯಾಣಿ, ಭೂಪ ರಾಗಗಳು ಜನರ ಮನ ಸೆಳೆದವು. ಅದಕ್ಕೆಂದೆ ಗದುಗಿನಲ್ಲಿ ನಾಲ್ಕು ತಿಂಗಳು ಪ್ರಯೋಗ ನಡೆಯಿತು. ಅಂದು ಗದುಗಿನಲ್ಲಿ ಚಿತ್ರ ಮಂದಿರಗಳು, ನಾಟಕ ಕಂಪನಿಗಳು ನಿಂತು ಹೋದವು. ಮುಂದೆ ವಿಜಾಪುರ, ಆಳಂದ, ಶಿವಮೊಗ್ಗ, ರಬಕವಿ, ಬಾಗಲಕೋಟೆ ಎಲ್ಲ ಜಿಲ್ಲೆಗಳಲ್ಲಿಯ ಶ್ರೀಕೃಷ್ಣ ಪಾರಿಜಾತದ ಕೀರ್ತಿ ಹಬ್ಬಿತು. ಆಗ ಈ ಕಂಪನಿಯಲ್ಲಿ ಚಂಪಾಬಾಯಿ ಕೊರವಂಜಿ, ರುಕ್ಮಿಣಿ ಪಾತ್ರ ಅಭಿನಯಿಸಿದರೆ ಹಾಜೀಸಾಹೇಬ ನಧಾಪರು ದೂತಿ ಪಾತ್ರಕ್ಕೆ ಜೀವ ತುಂಬಿಕೊಡುತ್ತಿದ್ದರು. ಕೃಷ್ಣನ ಪಾತ್ರ ಅಪ್ಪಾಲಾಲರು ನಿರ್ವಹಿಸುತ್ತಿದ್ದರು. ಹಾರ್ಮೋನಿಯಂ ಮಾಸ್ತರ ಸತ್ಯಪ್ಪ ಚಿಗರಿಯವರ ಸೇವೆ ಸ್ಮರಣೀಯ ಎಂದು ಉತ್ತರ ಕರ್ನಾಟಕ ಜನ ಇನ್ನು ಮೇಲಕು ಹಾಕುತ್ತಾರೆ.

ಬಯಲಾಟಗಳು ಊರಿಂದೂರಿಗೆ ಪ್ರಯಾಣ ಮಾಡುವಾಗ ಅನೇಕ ಅಡೆತಡೆಗಳು ಬರುವುದುಂಟು. ಈ ಕಂಪನಿಯ ಎಲ್ಲ ಪರಿಕರಗಳು ಚಕ್ಕಡಿಗಾಡಿಯಲ್ಲಿ ಸಾಗುತ್ತಿದ್ದರು. ಅಲ್ಲದೇ ವೇಷ–ಭೂಷಣಗಳು ಹಳ್ಳಿಯ ಜನರಿಂದಲೇ ಪಡೆದುಕೊಳ್ಳುತ್ತಿದ್ದರು. ಈ ಎಲ್ಲ ಕಷ್ಟದಲ್ಲಿಯು ಪಾರಿಜಾತ ಬಯಲಾಟದಲ್ಲಿ ಎಸ್ಸಸನ್ನು ಸಾಧಿಸಿದರು. ಈ ಸಾಧನೆಯಿಂದ ಕರ್ನಾಟಕ ಸರ್ಕಾರ ದಿಲ್ಲಿಯಲ್ಲಿ ನಡೆಯುತ್ತಿರುವ ಜಾನಪದ ಸಮ್ಮೇಳನಕ್ಕೆ ಆಯ್ಕೆ ಮಾಡಿತು. ಆಗಿನ ಪ್ರಧಾನಿಯಾದ ಶ್ರೀಮತಿ ಇಂದಿರಾಗಾಂಧಿ ಸ್ವತಃ ಕುಳಿತು ಆಟವನ್ನು ವೀಕ್ಷಿಸಿ ಸಂತೋಷಗೊಂಡರು. ಆ ಮೇಲೆ ಅಪ್ಪಾಲಾಲರನ್ನು ಅಂದು ಒಂದು ಸಾವಿರ ರೂಪಾಯಿ ಬಹುಮಾನ ಮತ್ತು ಶಾಲನ್ನೊಧಿಸಿ ಸನ್ಮಾನಿಸಲಾಯಿತು. ಅಲ್ಲದೇ ರೇಡಿಯೋ ಮತ್ತು ಟ.ವ್ಹಿ.ಗಳಲ್ಲಿ ಕಾರ್ಯಕ್ರಮಗಳು ಪ್ರಸಾರಗೊಂಡವು. ಅಪ್ಪಾಲಾಲರು ತಮ್ಮ ಜೀವಿತದ ಅವಧಿಯಲ್ಲಿ ಶ್ರೀಕೃಷ್ಣ ಪಾರಿಜಾತದಲ್ಲಿ ೬೫೦೦ ಕ್ಕೂ ಮಿಕ್ಕಿ ಪ್ರದರ್ಶನ ನೀಡಿದ್ದಾರೆ. ಅಲ್ಲದೆ ಕರ್ನಾಟಕ ಸರಕಾರ ಜಾನಪದ ಅಕಾಡೆಮಿಯ ಸದಸ್ಯರಾಗಿ ಆಯ್ಕೆ ಮಾಡಿತು. ಇವರು ಮೂರು ವರ್ಷ ಅಕಾಡೆಮಿಯ ಸದಸ್ಯರಾಗಿ ಕೆಲಸ ನಿರ್ವಹಿಸಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ ಇವರ ಸ್ತ್ರೀ ಪಾತ್ರದ ಅಭಿನಯ ಸಾಮಾನ್ಯವಾಗಿ ಸ್ತ್ರೀಯನ್ನೆ ಹೋಲುವಂತೆ ಇತ್ತು. ಅಭಿನಯದಲ್ಲಿ ಸತ್ಯಭಾಮೆಯ ಎನ್ನುವ ಪಾತ್ರ ತುಂಬ ತನ್ಮಯರಾಗಿ ಮಾಡಿ ಪ್ರೇಕ್ಷಕರ ಮನಸ್ಸನ್ನು ಸೆರೆ ಹಿಡಿಯುವಂತೆ ಮಾಡಿ, ಜನ–ಮನ ಗೆದ್ದ ಮಹಾನ್ ಕಲಾವಿಧರಾಗಿದ್ದರು ಅಪ್ಪಾಲಾಲರು.

ಹೀಗೆ ಅಪರಾಳ ತಮ್ಮಣ್ಣ ಮತ್ತು ಕುಲಗೋಡ ತಮ್ಮಣ್ಣ ಹಾಗೂ ಅಭಿನಯ ಕಲಾವಿಧರಾದ ಕೌಜಲಗಿ ನಿಂಗವ್ವ, ಜಮಖಂಡಿ ಅಪ್ಪಾಲಾಲ್, ಮಲ್ಲಯ್ಯಸ್ವಾಮಿ ಅಥಣಿ, ಬರಗಿ ರಾಚಯ್ಯ ಸ್ವಾಮಿ, ಕೃಷ್ಣಾಜಿ ದೇಶಪಾಂಡೆ ನಣದಿ ಚಂಪಾಬಾಯಿ, ಬರಗಿ ರಾಚಯ್ಯ, ಅಲ್ಲದೇ ಪಾರಿಜಾತದ ಸುಪ್ರಸಿದ್ಧ ಕಲಾ ತಂಡಗಳು ಕೃಷ್ಣಾ ನದಿಯ ತಟದಲ್ಲಿ ಬೆಳೆದವು ಅವುಗಳಲ್ಲಿ ಸವದಿ, ಶೂರ್ಪಾಲಿ, ಮಹಾಲಿಂಗಪೂರ, ಆಲಗೂರ, ಕುಂಚನೂರ, ಮೈಗೂರ, ಜಮಖಂಡಿ, ಲೋಕಾಪುರ ಮುಂತಾದ ಗ್ರಾಮಗಳ ತಂಡಗಳು ಪ್ರಸಿದ್ಧಿಯನ್ನು ಪಡೆದವು.

ಎರಡು ಮೂರು ತಲೆಮಾರುಗಳಿಂದ ಬೆಳೆದು ಬಂದ ಶ್ರೀಕೃಷ್ಣ ಪಾರಿಜಾತದ ಪರಂಪರೆಯು ಬರಬರುತ್ತ ತನ್ನ ಮೂಲ ಸೌಂದರ್ಯದಿಂದ ದೂರವಾಗುತ್ತಾ ನಡೆಯಿತು. ಅಪರಾಳ ತಮ್ಮಣ್ಣನ ಮೂಲ ಕೃತಿ ಪಾಠಮಾಡಿ ಹಾಡುವುದು ತಂಡು ತುಂಡು ಸಾಂಕೇತಿಕವಾಗಿ ಬೆಳೆದು ಬರತೊಡಗಿತು. ಆಧುನಿಕ ನಾಟಕ ಗೀತಗಳ ಧಾಟಿಯ ಹಾಡುಗಳು ಸೇರಿಕೊಂಡವು. ಗಮಕ ಪ್ರಧಾನವಾದ ಸೀಸಪದ್ಯ-ದ್ವಿಪದಿ-ವಚನಗಳು ಹೇಳ ಹೆಸರಿಲ್ಲದೆ ಹಾಡುಗಳು ಮರೆಯಾದವು. ಒಟ್ಟಿನಲ್ಲಿ ಹೇಳುವುದಾದರೆ 'ಶ್ರೀಕೃಷ್ಣ ಪಾರಿಜಾತ ಆಟ ಎಂದು ರಂಗದ ಮೇಲೆ ಜೀವಿಸಿಕೊಂಡು ಬಂದಿರುವುದು. ಮೂಲ ಪಾರಿಜಾತದ ಅಪಭ್ರಂಶ ರೂಪವಾಗಿದೆ. ಇದಕ್ಕೆ ಕಾರಣ ಸಾಮಾನ್ಯ ಜನರನ್ನು ರಂಜಿಸುವ ಉದ್ದೇಶವನ್ನಿಟ್ಟುಕೊಂಡಿರುವ ಇಂದಿನ ಮೇಳಗಳು ಕೀಳು ಅಭಿರುಚಿಯನ್ನು ಹೆಚ್ಚಿಸುವ ಅಶ್ಲೀಲತೆಗೆ ಹೆಚ್ಚಿನ ಅವಕಾಶವನ್ನು ಕೊಟ್ಟಿರುತ್ತವೆ.

**ಊ) ಮಲ್ಲಯ್ಯ ಸ್ವಾಮಿ ಅಥಣಿ :**

ಜನಪದ ಸಾಹಿತ್ಯದ ಕಲೆಯ ನೆಲೆಯಾದ ಜಮಖಂಡಿ ತಾಲೂಕಿನ ಪರಿಸರವು ಅನೇಕ ಹಾಡು, ಕಲೆ, ಸಂಗೀತ, ಆಟೋಟ ಮುಂತಾದವುಗಳಲ್ಲಿ ಹೆಸರುವಾಸಿಯಾಗಿದೆ. ಆದ್ದರಿಂದ ಇಲ್ಲಿಯ ಪ್ರತಿಭೆಗಳು ರಾಜ್ಯ ರಾಷ್ಟ್ರಮಟ್ಟದಲ್ಲಿ ಹೆಸರು ಗಳಿಸಿದವರಾಗಿದ್ದಾರೆ. ಇಂಥಹ ಕಲೆಯ ನೆಲೆಯಾದ ಜಮಖಂಡಿ ತಾಲೂಕಿನ ಮೈಗೂರ ಗ್ರಾಮದಲ್ಲಿ ದಿನಾಂಕ : ೧೪-೦೧-೧೯೧೮ ರಲ್ಲಿ ಮಲ್ಲಯ್ಯ ಸ್ವಾಮಿ ಅಥಣಿಯಲ್ಲಿ ಜನಿಸಿದರು. "ಬೆಳೆಯುವ ಪೈರು ಮೊಳಕೆಯಲ್ಲಿ" ಎನ್ನುವಂತೆ ಮಲ್ಲಯ್ಯ ಸ್ವಾಮಿಯವರು ಚಿಕ್ಕವರಿರೂವಾಗಲೇ ಹಾಡುವ, ಕುಣಿಯುವ ಕಲೆಯ ಕಡೆಗೆ ಒಲವು ತೋರಿದರು. ಅದರಂತೆ ಮನೆಯಲ್ಲಿಯ ಪರಿಸರವು ಸಂಗೀತಮಯವಾಗಿದ್ದರಿಂದ ಇವರೊಬ್ಬ ಉತ್ತಮ ಕಲಾವಿಧರಾಗಿ ರೂಪಿತರಾಗಲು ಅನುಕೂಲವಾಯಿತು. ಇವರ ಮನೆಯಲ್ಲಿನ ಕುಟುಂಬ ಸದಸ್ಯರೆಲ್ಲರು ಕಲಾವಿಧರೇ ಆಗಿದ್ದರು.

ಮಲ್ಲಯ್ಯ ಸ್ವಾಮಿ ಅಥಣಿಯವರಿಗೆ ಬಾಲ್ಯದಲ್ಲಿ ಭಜನೆ ಹಾಡುಗಳು ಹಾಡುವುದೆಂದರೆ ಬಹಳ ಇಷ್ಟ. ಇವರ ಹಾಡು ಕೇಳಿದ ಶ್ರೀ ವಿರುಪಾಕ್ಷಯ್ಯ ಸ್ವಾಮಿ ಸಾಲಿಮಠ ಇವನೊಬ್ಬ ದೊಡ್ಡ ಕಲಾವಿದ ಆಗಬಹುದೆಂದು ಗುರುತಿಸಿ ತನ್ನ ಸಂಗೀತ ಗರಡಿಯಲ್ಲಿ ಶಿಕ್ಷಣವನ್ನು ನೀಡಿದರು. ಮುಂದೆ ಬಾಲಕ ಹಾಡುವುದರೊಂದಿಗೆ ಬಯಲಾಟದಲ್ಲಿ ಹೆಚ್ಚು ಆಸಕ್ತಿಯನ್ನು ತೋರಿ ಬಯಲಾಟದಲ್ಲಿ ನಿಪುಣತೆಯನ್ನು ಸಾಧಿಸಿದನು. ಅಂದಿನ ಬಯಲಾಟಗಳಲ್ಲಿ ಜನಪ್ರಿಯತೆ ಪಡೆದ ಶ್ರೀಕೃಷ್ಣ ಪಾರಿಜಾತದಲ್ಲಿ ೧೯೩೦ ರಲ್ಲಿ ಮೊದಲ ಬಾರಿಗೆ ತಿಕೋಟಾ ಗ್ರಾಮದಲ್ಲಿ 'ಸತ್ಯಭಾಮೆ' ಮತ್ತು 'ಕೊರವಂಜಿ' ಪಾತ್ರಗಳನ್ನು ಅಭಿನಯಿಸಿ ಜನರಿಂದ ಬೇಷ ಎನಿಸಿಕೊಂಡ, ಮುಂದೇ ಅದೇ ರೀತಿಯಾಗಿ ಪಾರಿಜಾತ ಕಲೆಯ ಅಭಿರುಚಿಯಿಂದ ಮಲ್ಲಯ್ಯ ಸ್ವಾಮಿ ಅಥಣಿಯವರು ತಮ್ಮ ಕುಟುಂಬದ ಸದಸ್ಯರನ್ನು ಸಹ ಅಭಿನಯಿಸಲು ಅನುವು ಮಾಡಿಕೊಟ್ಟರು.

---

ಗ್ರಂಥಋಣ : ಕನ್ನಡ ಜನಪದ ಸಾಹಿತ್ಯ : ಕ.ವಿ.ಧಾರವಾಡ
ಜನಪದ ರಂಗಕಲಾವಿದ ಅಪ್ಪಾಲಾಲ : ಡಾ॥ ಕಾಳಿಂಗ. ಗೊಳಸಂಗಿ

೧೯೪೦ರಲ್ಲಿ ಶ್ರೀ ವೆಂಕಟೇಶ್ವರ ಕೃಷ್ಣ ಪಾರಿಜಾತ ಕಂಪನಿ, ಎಂಬ ನಾಟಕ ಕಂಪನಿಯನ್ನು ಜಮಖಂಡಿಯಲ್ಲಿ ಸ್ಥಾಪಿಸಿದರು. ಈ ನಾಟಕ ಕಂಪನಿಯು 'ದಶಾವತಾರದ' ವಿವಿಧ ಬಯಲಾಟಗಳನ್ನು ಪ್ರದರ್ಶಿಸಿದೆ. ಅದರಲ್ಲಿ ಶ್ರೀಕೃಷ್ಣ ಪಾರಿಜಾತವನ್ನು ಪ್ರಮುಖವಾಗಿ ೪೬ ವರ್ಷಗಳವರೆಗೆ ಸತತ ಪ್ರಯೋಗಗಳನ್ನು ಮಾಡಿ ಉತ್ತರ ಕರ್ನಾಟಕದಲ್ಲಿ ತನ್ನ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಂಡಿದೆ.

ಮಲ್ಲಯ್ಯ ಸ್ವಾಮಿ ಅಥಣಿಯವರಿಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಲಭಿಸಿವೆ. ಅವುಗಳಲ್ಲಿ ಪ್ರಮುಖವಾದ ಪ್ರಶಸ್ತಿ ಎಂದರೆ ಕರ್ನಾಟಕ ಸರ್ಕಾರದಿಂದ ದೊರೆತ 'ರಾಜ್ಯೋತ್ಸವ ಪ್ರಶಸ್ತಿ', 'ಶ್ರೀ ವೆಂಕಟೇಶ್ವರ ಕೃಷ್ಣ ಪಾರಿಜಾತ' ಕಂಪನಿಯು ನಾಡಿನಾದ್ಯಂತ ಸಂಚರಿಸಿದಲ್ಲದೇ ನೆರೆಯ ಮಹಾರಾಷ್ಟ್ರದಲ್ಲಿಯೂ ತನ್ನ ಪ್ರದರ್ಶನಗಳಿಂದಾಗಿ ಪ್ರಸಿದ್ಧಿಯನ್ನು ಪಡೆದಿದೆ. ಶ್ರೀ ಮಲ್ಲಯ್ಯ ಸ್ವಾಮಿ ಅಥಣಿಯವರು ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿಯೂ ತಮ್ಮ ಕಲೆಯ ಕಾರ್ಯಕ್ರಮಗಳನ್ನು ನೀಡಿದ್ದರಿಂದ ಅವುಗಳು ನಾಡಿನಾದ್ಯಂತ ಪ್ರಸಾರಗೊಂಡಿವೆ. ಮತ್ತು ಅವರ ಜನಪ್ರಿಯತೆಯನ್ನು ಹೆಚ್ಚಿಸಿವೆ.

ಶ್ರೀಯುತರು ಶ್ರೀಕೃಷ್ಣ ಪಾರಿಜಾತವನ್ನು ಸುಮಾರು ಹತ್ತು ಸಾವಿರ ಪ್ರಯೋಗಗಳನ್ನು ಮಾಡಿ ಕಲಾಭಿಮಾನಿಗಳ ಆರಾಧನೆಗೆ ಅಥವಾ ಆದರಕ್ಕೆ ಪಾತ್ರರಾಗಿದ್ದಾರೆ. ಇಂದಿಗೂ ಕೂಡಾ ಇವರು ತಮ್ಮ ಇಳಿಯ ವಯಸ್ಸಿನಲ್ಲಿಯೂ ಸಹ ತಮ್ಮ ಕಲಾ ಪ್ರದರ್ಶನಗಳನ್ನು ನೀಡಿ ನೋಡುಗರನ್ನು ಮಂತ್ರಮುಗ್ಧರನ್ನಾಗಿಸಿ ಮನಸೂರೆಗೊಳಿಸುತ್ತಾರೆ. ಅದಕ್ಕಾಗಿಯೇ ಜಮಖಂಡಿಯ ಜನ ಇವರನ್ನು ತಮ್ಮ ಕಲಾ ಆಸ್ತಿ ಎಂದು ಅತ್ಯಂತ ಹೆಮ್ಮೆಯ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ.



ರಾಮಚಂದ್ರ ಕೃಷ್ಣಾಜಿ ಸಾವಂತ
(ನಣದಿ ರಾಮಣ್ಣ)



ಸವದಿ ಮಲ್ಲಯ್ಯ



ಬರಗಿ ರಾಚಯ್ಯ



ನರಸಾಪುರ ಶಿವಗುರಿ



ಶ್ರೀ ಮಲ್ಲಯ್ಯಸ್ವಾಮಿ ಅಥಣಿ 'ಶ್ರೀಕೃಷ್ಣ' ಪಾತ್ರದಲ್ಲಿ



ಶ್ರೀಕೃಷ್ಣ ಪಾರಿಜಾತದ ದೃಶ್ಯ



ಶ್ರೀ ಮಲ್ಲಯ್ಯಸ್ವಾಮಿ ಅಥಣಿ
ಕುಟುಂಬ ವರ್ಗ ವಿವಿಧ ಪಾತ್ರಗಳಲ್ಲಿ



ಜಮಖಂಡಿ ಅಪ್ಪಾಲಾಲ
ಸ್ತ್ರೀ ಪಾತ್ರದಲ್ಲಿ

## ಅಧ್ಯಾಯ – ೩

# ಶ್ರೀಕೃಷ್ಣ ಪಾರಿಜಾತದ ಕಥಾವಸ್ತು

ಶ್ರೀಕೃಷ್ಣ ಪಾರಿಜಾತ ಬಯಲಾಟದ ಕಥಾವಸ್ತು ಭಾಗವತದಶಮಸ್ಕಂದದಲ್ಲಿ ಬರುವ ಶ್ರೀಕೃಷ್ಣ ಚರಿತ್ರೆ ಸ್ವಾರಸ್ಯಕರವಾದ ಒಂದು ರಮಣೀಯ ಸಂದರ್ಭವನ್ನು ಒಳಗೊಂಡದ್ದಾಗಿದೆ.

ಒಂದು ದಿನ ವಿಷ್ಣುವಿನಲ್ಲಿಗೆ ಭೃಗುಋಷಿಗಳು ಬಂದಾಗ ನಾರಾಯಣನು ಶ್ರೀ ಲಕ್ಷ್ಮೀಯೊಂದಿಗೆ ಸರಸೋಕ್ತಿಗಳಲ್ಲಿ ಬೆರೆತಿರುತ್ತಾರೆ. ಋಷಿಗಳಿಗೆ ಅತಿಥಿ ಉಪಚಾರ ಮಾಡದ ಕಾರಣದಿಂದ ಕ್ರೋಧಾಂಧನಾದ ಋಷಿ ನಾರಾಯಣನಿಗೆ ಶಾಪ ಕೊಡುತ್ತಾನೆ. ಆಗ ಶ್ರೀಹರಿಯ ಋಷಿಯನ್ನು ಸಂತೈಸಿ ಕ್ಷಮಾಪಣೆ ಕೇಳುತ್ತಾನೆ. ಋಷಿ ಸಮಾಧಾನ ಹೊಂದಿ ಹೊರಡುತ್ತಾನೆ. ಆಗ ಶ್ರೀಹರಿಯು ಈ ಮಾನ ಹೀನ ವೃತ್ತಿಯಿಂದ ನೊಂದ ಶ್ರೀ ಲಕ್ಷ್ಮೀಯು ವೈಕುಂಠವನ್ನು ಬಿಟ್ಟು ಭೂಲೋಕದ ಕೊಲ್ಲಾಪುರಕ್ಕೆ ಬರುತ್ತಾಳೆ.

ಶ್ರೀ ಹರಿಯು ಕೂಡಾ ಭೂಲೋಕ್ಕೆಂದು ತಿರುಮಲೆ ಪರ್ವತ ವರಾಹ ಗಿರಿಯಲ್ಲಿ ಶ್ರೀನಿವಾಸ ಎಂಬ ಹೆಸರಿನಿಂದ ವಾಸವಾಗುತ್ತಾನೆ. ಒಂದು ದಿನ ಅಲ್ಲಿಯ ರಾಜನಾದ ಆಕಾಶರಾಜನ ಮಗಳು ಪದ್ಮಾವತಿಯನ್ನು ಕಂಡು ಮೋಹಿಸುತ್ತಾನೆ. ಪದ್ಮಾವತಿಯೂ ಈ ಅನುಪಮ ಸುಂದರನನ್ನು ಮೋಹಿಸಿದರೂ ಸ್ತ್ರೀ ಸ್ವಭಾವಕ್ಕೆನುಗುಣವಾಗಿ ಬಹಿರಂಗವಾಗಿ ಕಠೋರ ವಿರೋಧವನ್ನು ತೋರಿ ಅವನನ್ನು ತಿರಸ್ಕರಿಸುತ್ತಾಳೆ. ಇವರಿಬ್ಬರೂ ದಾರುಣವಾದ ವಿರಹ ವೇಧನೆಯಿಂದ ಪರಿತಪಿಸುತ್ತಿರುತ್ತಾರೆ. ಪದ್ಮಾವತಿಯ ಅಂತರಂಗವನ್ನು ತಿಳಿಯಲು ಶ್ರೀನಿವಾಸನು 'ಕೊರವಂಜಿ'ಯ ವೇಷಧರಿಸಿ ನಾರಾಯಣಪುರದಲ್ಲಿದ್ದ ಆಕಾಶರಾಜನ ಅಂತಃಪುರಕ್ಕೆ ಹೋಗುತ್ತಾನೆ. ಪದ್ಮಾವತಿಗೆ (ಸತ್ಯಾಭಾಮೆಗೆ) ಕಣಿ ಹೇಳಿ ಅವಳ ಅಂತರಂಗವನ್ನು ಅರಿತು ಬರುತ್ತಾನೆ. ಪದ್ಮಾವತಿಯು ಕಾಮಜ್ವರದಿಂದ ಬಳಲುತ್ತಿರುವುದನ್ನುರಿತ ಅವಳ ತಾಯಿಯ ಗಾಬರಿಯಾಗುತ್ತಾಳೆ. ಶ್ರೀನಿವಾಸನ ತಾಯಿ ಭೂಮಾತೆಯಾದ 'ಬಕುಲಾವತಿ'ಯ ಮಧ್ಯಸ್ಥಿಕೆಯಿಂದ ದಿವ್ಯ ವೈಭವದಿಂದ ವಿವಾಹ ಸಮಾರಂಭ ಜರುಗುತ್ತದೆ. ಈ ವಿಧಿಯೆ ಶ್ರೀಕೃಷ್ಣ ಪಾರಿಜಾತದ ಮೂಲ ಕಥಾವಸ್ತು.[೧] ಈ ಕಥೆಯಲ್ಲಿ ಪಾರಿಜಾತ ಹೂವಿನ ಪ್ರಸ್ಥಾಪವೇ ಬರುವುದಿಲ್ಲ.

೧. ಆರ್. ಬಿ. ಕುಲಕರ್ಣಿ : ಶ್ರೀಕೃಷ್ಣ ಪಾರಿಜಾತ : ಪುಟಸಂಖ್ಯೆ – ೯೪

## ಪುರಾಣದ ಕಥಾವಸ್ತು :

ಒಂದು ದಿನ ರುಕ್ಮೀಣಿಯ ಉಪೋಷಣವ್ರತ ಪಾರಣೆಯ ದಿನ ಶ್ರೀಕೃಷ್ಣನು ಸಂತೋಷದಿಂದಿದ್ದಾಗ, ದೇವಲೋಕದಿಂದ ನಾರದ ಮಹಾಋಷಿಗಳು ಬಂದರು. ಆಗ ಶ್ರೀಕೃಷ್ಣ–ರುಕ್ಮೀಣಿ ದೇವಋಷಿಯನ್ನು ಭಕ್ತಿ–ಭಾವದಿಂದ ಉಪಚರಿಸಿದನು. ಈ ಸತ್ಕಾರದಿಂದ ಸಂಪ್ರೀತನಾದ ನಾರದನು ಶ್ರೀಕೃಷ್ಣನಿಗೆ ಪಾರಿಜಾತ ಪುಷ್ಪವನ್ನು ಕೊಟ್ಟನು. ಶ್ರೀಕೃಷ್ಣನು ಪಾರಿಜಾತ ಪುಷ್ಪವನ್ನು ಬಹಳ ಪ್ರೀತಿಯಿಂದ ರುಕ್ಮೀಣಿಯ ಜೆಡೆಗೆ ಮುಡಿಸಿದನು. ಅದರ ಸುಗಂಧವು ಅರಮನೆಯನ್ನೆಲ್ಲಾ ಆವರಿಸಿತು. ಆಗ ನಾರದಮುನಿಗಳು ರುಕ್ಮೀಣಿದೇವಿ ಲೋಕೋತ್ತರ ಗುಣಗಳಿಂದ ಕೂಡಿದ ಈ 'ಹೂ' ನಿನಗೊಬ್ಬಳಿಗೆ ಶೋಭಿಸುತ್ತಿದೆ. ಶ್ರೀಕೃಷ್ಣನ ಪ್ರೀತಿ ಎಲ್ಲ ನಿನ್ನಲ್ಲಿಯೆ ಇದೆ ಎಂದು ಹೇಳಿದನು. ದೂತಿಯ ಮುಖಾಂತರ ಈ ವಾರ್ತೆಯನ್ನು ಸತ್ಯಭಾಮೆಯು ಕೇಳಿ ಇದು ತನ್ನ ಮಾನಕ್ಕೆ ಕುಂದೆಂದು ತಿಳಿದು ಉರಿದೆದ್ದಳು. ಆಗ ಸರ್ವಜ್ಞನಾದ ಶ್ರೀಕೃಷ್ಣನು ಅವಳನ್ನು ಸಂತೈಸಲು ಸತ್ಯಭಾಮೆಯ ಮಂದಿರಕ್ಕೆ ಹೋದನು. ಕೋಪಿತೆಯಾದ ಅವಳನ್ನು ವಿವಿಧ ಶೃಂಗಾರ ರಸಭರಿತ ಮಧುರ ಮಾತುಗಳಿಂದ ಸಂತೈಸಿ ಅವಳ ಕ್ರೋಧಕ್ಕೆ ಕಾರಣವಾದ ಪಾರಿಜಾತ ವೃಷವನ್ನೇ ಅವಳ ಅಂಗಳದಲ್ಲಿ ನೆಡುವ ವಚನಕೊಟ್ಟನು.

ಅನಂತರ ನಾರದರೊಂದಿಗೆ ಪಾರಿಜಾತ ವೃಕ್ಷವನ್ನು ಭೂಮಿಗೆ ಕಳಿಸಲು ದೇವೇಂದ್ರನಿಗೆ ಸಂದೇಶ ಕಳಿಸಿದನು. ದುರಹಂಕಾರಿಯಾದ ದೇವೇಂದ್ರನು ನಿರಾಕರಿಸಲು, ಶ್ರೀಕೃಷ್ಣನು ಪ್ರದ್ಯುಮ್ನಾದಿವೀರರೊಂದಿಗೆ ಅಮರಾವತಿಗೆ ಬಂದು, ಅಲ್ಲಿದ್ದ ನಂದನವನದಲ್ಲಿಯ ಪಾರಿಜಾತವನ್ನು ಕಿತ್ತುಕೊಂಡು ಗರುಡನ ಮೇಲೇರಿ ಅಮರಾವತಿ ಪ್ರದಕ್ಷಣೆ ಹಾಕಿದನು. ಇದನ್ನರಿತ ಇಂದ್ರನು ಕೋಪಗೊಂಡು ಶ್ರೀಕೃಷ್ಣನನ್ನು ಎದುರಿಸಿದನು. ಇವರಿರ್ವರಿಗೆ ಘನಘೋರವಾದ ಯುದ್ಧ ನಡೆದು, ಇಂದ್ರನ ಶಕ್ತಿ ಹೀನನಾಗಿ ದೇವ ಮಾತಾಪಿತ್ರಗಳಾದ ಕಶ್ಯಪ, ಅದೀತಿಯರ ಸಂಧಾನದಿಂದ ಯುದ್ಧವು ಕೊನೆಗೊಂಡು ದೇವೇಂದ್ರನು – ನರೇಂದ್ರನಾದ ಶ್ರೀಕೃಷ್ಣನು ಒಂದುಗೂಡಿದರು. ಆಗ ಶ್ರೀಕೃಷ್ಣನು ಪಾರಿಜಾತವನ್ನು ತಂದು ಸತ್ಯಭಾಮೆಯ ಅಂಗಳದಲ್ಲಿ ನೆಟ್ಟನು. ಆಗ ಸತ್ಯಭಾಮೆಯು ವೈಭವದಿಂದ ಪುಣ್ಯವ್ರತವನ್ನು ಮಾಡಿದಳು.[೧]

## ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ :

ಅಪರಾಳ ತಮ್ಮಣ್ಣನು ಈ ಮೊದಲು ಹೇಳಿದ ಎರಡು ಆಕರಗಳು ಸಮನ್ವಯಿಸಿ ತನ್ನ ನಾಟಕದಲ್ಲಿ ಮನೋಹರವಾಗಿ ಚಿತ್ರಿಸಿದ್ದಾನೆ. ಏಕೆಂದರೆ ಅಪರಾಳ ತಮ್ಮಣ್ಣನು ಕನ್ನಡ, ಸಂಸ್ಕೃತಗಳಲ್ಲಿ ವಿದ್ವಾಂಸನಾಗಿದ್ದನಲ್ಲದೇ ತೆಲಗು ಬಲ್ಲವನಾಗಿದ್ದನು. ಇವನು ತತ್ವಜ್ಞಾನ, ಧಾರ್ಮಿಕ ವಿಚಾರಗಳನ್ನು ಅರಿತವನಾಗಿದ್ದನು. ಲೌಕಿಕ ಸಾಮಾಜಿಕ, ರೀತಿನೀತಿಗಳನ್ನು ನಿರೀಕ್ಷಿಸಿದವನಾಗಿದ್ದನು. ಉದಾರವಾದಿಯಾದ ಕಲಾವಿದನು ಕೂಡಾ ಆಗಿದ್ದನು. ಈ ಕಾರಣದಿಂದಾಗಿ ಪ್ರತಿಭಾ ಶೀಲಾದ ವರಕವಿ ಜನಮನರಂಜನೆಯೂ

೧. ಆ ಹರಿವಂಶ ಪುರಾಣ : ಪಂ. ಪಂಡರೀನಾಥಚಾರ್ಯ ಗಲಗಲಿ : ಪುಟಸಂಖ್ಯೆ – ೬೦೪–೬೪೬

ಆಗಿರಬೇಕು. ರಸಿಕರ ಹೃದಯ ಗೆದ್ದವನಾಗಿರಬೇಕು, ಹಬ್ಬ ಹರಿದಿನಗಳಲ್ಲಿ ಹೆಣ್ಣು ಮಕ್ಕಳು ಭಕ್ತಿಭಾವದಿಂದ ಪಠಿಸಲು ಪಾರಾಯಣಕ್ಕೆ ಯೋಗ್ಯವಾದ ಹಾಡುಗಬ್ಬವು ಆಗಿರಬೇಕು. ಈ ಎಲ್ಲ ವಿಚಾರಗಳನ್ನು ಮನದಲ್ಲಿಟ್ಟುಕೊಂಡು ಜನಪದ ಹಾಗೂ ಸಾಹಿತ್ಯಿಕ ಶೈಲಿಗಳನ್ನು ಕೂಡಿಸಿ, ತನ್ನ ನಾಟಕಕ್ಕೆ ತನ್ನದೇ ಆದ ಮಧುರ ಶೈಲಿಯನ್ನು ರೂಪಿಸಿಕೊಟ್ಟಿದ್ದಾನೆ. ಅವನ ಈ ಗೀತನಾಟಕದ ಕಥಾವಸ್ತು ಈ ರೀತಿ ಇದೆ.

ಭೂದೇವಿಯ ದೈತ್ಯರ ಭಾರವನ್ನು ಧರಿಸಲಾರದೇ ಕ್ಷೀರಾರ್ಣವಕ್ಕೆ ಶ್ರೀಹರಿಯಿದ್ದಲಿಗೆ ಆಗಮಿಸಿ, ಶಿರಬಾಗಿ, ಪರಮಾತ್ಮನನ್ನು ಕುರಿತು ದನುಜಮದಗಜಸಿಂಹ ನರಹರಿಯೆ, ದನುಜಭಾರವನು ಪರಿಹರಿಸಬೇಕೆಂದು ಭಿನ್ನಹ ಮಾಡಿದಳು. ಶ್ರೀಹರಿಯು ಧರಣಿಗಭಯವನಿತ್ತು ಕಳುಹಿದನು. ಅನಂತರ ಭಕ್ತ ಉತ್ಸಲನಾದ ಪರಮ ಪುರುಷನು ದೇವಕಿಯ ಗರ್ಭದಲ್ಲಿ ಶ್ರೀಕೃಷ್ಣನಾಗಿ ಜನಸಿದನು.

ಬಾಲ್ಯದಲ್ಲಿ ಅನೇಕ ಅದ್ಭುತ ಲೀಲೆಗಳನ್ನು ಆಡಿ ಮಾಡಿ, ಸೋದರ ಮಾವನಾದ ಕಂಸನನ್ನು ಸಂಹರಿಸಿ, ತಾಯಿ-ತಂದೆಗಳನ್ನು ಬಂಧ ಮುಕ್ತ ಮಾಡಿ, ಸಾಗರದ ಮಧ್ಯದಲ್ಲಿ 'ದ್ವಾರಕಿ' ಎಂಬ ಹೊಸ ರಾಜ್ಯವನ್ನು ಸ್ಥಾಪಿಸಿ, ಸಕಲ ಪರಿವಾರ ಹಾಗೂ ಚತುರಂಗಬಲದೊಂದಿಗೆ ಬಂದು ಅಲ್ಲಿ ನೆಲೆಸಿದನು. ದ್ವಾರಕಿಯಲ್ಲಿ ಶ್ರೀಕೃಷ್ಣನು ನೀತಿ, ಭದ್ರೆ, ಮಿತ್ರ, ಮಿತ್ರವೃಂದೆ, ಕಾಳಿಂದಿ, ಲಕ್ಷಣೆ, ಬಾಂಬುವತಿ, ಸತ್ಯಭಾಮೆ ಹಾಗೂ ರುಕ್ಮಿಣಿಯರಂಬ ಅನುಪಮ ಸುಂದರವಾದ ಒಂಬತ್ತು ಜನ ಪತ್ನಿಯರೊಂದಿಗೆ, ಅಷ್ಟೈಶ್ವರ್ಯ ಭೋಗದಲ್ಲಿದ್ದನು.

ಒಂದು ದಿನ ದೇವರ್ಷಿ ನಾರದನು ಶ್ರೀಕೃಷ್ಣನಲ್ಲಿಗೆ ಬಂದು ಶೌರಿ ಮುಕುಂದ, ಸುರಪನ ಲೋಕದಿಂದ ಈ ಪಾರಿಜಾತ ಪುಷ್ಪವನ್ನು ತಂದಿದ್ದೇನೆ. ಇದು ರುಕ್ಮಿಣಿಗೆ ಸಲ್ಲುವಂತಹದ್ದು ಎಂದು ಹೇಳಿ ಅದನ್ನು ಶ್ರೀಕೃಷ್ಣನಿಗೆ ಕೊಟ್ಟನು. ಶ್ರೀಕೃಷ್ಣನು ತನ್ನ ಪಟ್ಟದರಸಿಯಾದ ರುಕ್ಮಿಣಿಗೆ ಮುಡಿಸಿದನು. ಅಲ್ಲಿಂದ ನಾರದನು ಸತ್ಯಭಾಮೆಯ ಅಂತಃಪುರಕ್ಕೆ ಬಂದು ಶ್ರೀಕೃಷ್ಣನು ತಾನು ಕೊಟ್ಟ ಪಾರಿಜಾತವನ್ನು ರುಕ್ಮಿಣಿಗೆ ಮುಡಿಸಿದನೆಂದು ಹೇಳಿ, ಆನಂತರ ಪಾರಿಜಾತ ಪುಷ್ಪದ ಮಹತ್ವವನ್ನು ಹೇಳಿ ದೇವಲೋಕಕ್ಕೆ ತೆರಳಿದನು. ಸ್ವಾಭಿಮಾನಿಯಾದ ಸತ್ಯಭಾಮೆ, ಕೃಷ್ಣನ ಪಕ್ಷಪಾತದಿಂದ ಕೆರಳಿಕೆಂಡವಾಗುತ್ತಾಳೆ. ಆನಂತರ ಶ್ರೀಕೃಷ್ಣನಿಗೆ ಬರಲು ಬಿನ್ನಯಿಸಿ ಪತ್ರ ಒಂದನ್ನು ಬರೆದು ಶ್ರೀಕೃಷ್ಣನಲ್ಲಿಗೆ ಕಳುಹಿಸಕೊಡುವಳು. ಆ ಪತ್ರವನ್ನು (ರಾಜಕೀರ) ಪಕ್ಷಿ ರುಕ್ಮಿಣಿಯ ಮಂದಿರದಲ್ಲಿದ್ದ ಶ್ರೀಕೃಷ್ಣನಿಗೆ ಪತ್ರವನ್ನೊಪ್ಪಿಸಿ ಹತ್ತಿರದ ಮರವನ್ನೇರಿ ಕುಳಿತಿತು. ಶ್ರೀಕೃಷ್ಣನು ನಾರದನು ಹೊತ್ತಿಸಿದ ಕಲಹವನ್ನು ನೆನೆದು, ತಾನೊಂದು, ಮಧುರವಾದ ಪತ್ರ ಬರೆದು ರಾಜಕೀರದ ಮುಖದಲ್ಲಿರಿಸಿ ಕಳುಹಿಸಿದ. ಈ ಒಣಮಾತಿನ ಉತ್ತರದಿಂದ ಅವಳ (ಸತ್ಯಭಾಮೆ) ತಾಪ ಇನ್ನು ಹೆಚ್ಚಿತು. ಪ್ರಾಣಪ್ರೀಯನು ದೂರವಾದ ಅರಿವಾಗಿ ಕಾಮತಾಪದಿಂದ ಬೆಂಡಾದಳು. ಕ್ಷೀರಸಾಗರ ಕನ್ಯ ವಾರಿಬಾಲಯ ಲಕ್ಷ್ಮೀ ತನ್ನ ರಮಣನು ಭೂಲೋಕದಲ್ಲಿ ಅವತರಿಸಿದಾಗ ತನ್ನ ಒಂದಂಶದಿಂದ ಸತ್ರಾಜಿತ ಕುವರಿಯಾಗಿಯೂ, ತಾನು ಸ್ವತಃ ಭೀಷ್ಮಕ ಕುಮಾರಿಯಾಗಿಯೂ ಧರೆಯಲ್ಲಿ ಅವತರಿಸಿದಳು. ಸತ್ಯಭಾಮೆ ಈ ದಿವ್ಯಾಂಶ ಮರೆಯಾಗಿ ಸಂಸಾರದ ಮೋಹ ಪ್ರಜ್ವಲಿಸಿತು.

ಸತ್ಯಭಾಮೆಯು ಕಾಮಜ್ವರದಿಂದ ಪರಿತಪಿಸುತ ಯೋಚಿಸಿದಳು. ಶ್ರೀಕೃಷ್ಣನು ಪರಮಪುರುಷನೆಂಬ ಅರಿವೂ ಅವಳ ಈ ರೋಷದ ಉರಿಯಲ್ಲಿ ಧೂಮ್ರಾವೃತವಾಯಿತು. ಏನಾದರೂ ಮಾಡಿ ಪ್ರಾಣಪ್ರೀಯನನ್ನು ಅರಮನೆಗೆ ಕರೆಸಬೇಕೆಂದು ಯೋಚಿಸಿ ತನ್ನ ತವರು ಮನೆಯ ದೂತಿಯನ್ನು ಕರೆದು ನಾನಾ ವಿಧವಾಗಿ ಹೇಳಿ ಶ್ರೀಕೃಷ್ಣನನ್ನು ಕರೆತರಲು ಕಳುಹಿಸಿಕೊಡುವಳು.

ದೂತೆಯ ನಾನಾ ವಿಧವಾಗಿ ಸಿಂಗರಿಸಿಕೊಂಡು, ರುಕ್ಮೀಣಿಯ ಅಂತಃಪುರವನ್ನು ಪ್ರವೇಶಿಸುವಳು. ಅರಮನೆಯಲ್ಲಿ ಪೀಠದ ಮೇಲೆ ಕುಳಿತಿರುವ ಶ್ರೀಕೃಷ್ಣನನ್ನು ನಮಸ್ಕರಿಸಿ, ವಿರಹತಾಪದಿಂದ ಬಳಲಿಬೆಂಡಾದ ಸತ್ಯಭಾಮೆಯ ಕನಿಕರದ ಸ್ಥಿತಿಯನ್ನು ಮನ ಕರಗುವಂತೆ ಬಣ್ಣಿಸಿದನು. ಅಲ್ಲದೆ ಸತ್ಯಭಾಮೆಯ ಬಗೆಗಿನ ಪ್ರೇಮ ಅಭಿಮಾನ ಹೊಂದಿದ ದೂತಿ ಇದಕ್ಕೆಲ್ಲ ಕಾರಣ ರುಕ್ಮೀಣಿಯೇ ಎಂದು ಜೆರೆವಳು. ರುಕ್ಮೀಣಿಯನ್ನು ನಿಂದಿಸಿ ಒಂದೆರಡು ಇಲ್ಲಸಲ್ಲದ ಮಾತುಗಳನ್ನಾಡುವಳು. ರುಕ್ಮೀಣಿ ಉರಿದೆದ್ದು ದೂತೆಯ ಮಾನಭಂಗ ಮಾಡಿದಳು. ಆದರು ಶ್ರೀಕೃಷ್ಣನು ದೂತೆಗೆ ಯೋಗ್ಯ ಸಮಯಕ್ಕೆ ಬರುತ್ತೇನೆಂದು ಹೇಳಿ ಕಳುಹಿಸಿಕೊಡುವನು. ಈ ಸಂದರ್ಭವು ಸತ್ಯಭಾಮೆಗೆ ಒಂದೊಂದು ನಿಮಿಷ ಒಂದೊಂದು ಯುಗಕಳೆದಂತಾಗುತ್ತಿತ್ತು. ದೂತೆ ಬಂದು ತನಗಾದ ಮಾನಭಂಗವನ್ನು ಉಪ್ಪು-ಕಾರಹಚ್ಚಿ ಹೇಳುವಳು. ಸತ್ಯಭಾಮೆಯ ಮನ ವಿರಹತಾಪದಿಂದ ಮರುಗಿದಳು. ಆಕೆಗೆ ಎಲ್ಲ ವಿಷಯ ಸುಖಗಳ ಮೇಲೆ ಕೋಪ ಹುಟ್ಟಿತು.

"ಎನ್ನ ಹೋಲುವ ಪಾಪಿ ಹೆಣ್ಣು ಈ ಇಳೆಯೊಳಗೆ ಮುಂದಿನ ಏಳೇಳು
ಜನ್ಮಕ್ಕೆ ಜನಿಸಬ್ಯಾಡಾ"

ಎಂದು ಹೆಣ್ಣಿನ ಜನ್ಮವನ್ನು ನಿಂದಿಸಿಕೊಂಡಳು. ಈ ರೀತಿಯಾಗಿ ವಂಚಿಸಿದ ಆ ಕಪಟ ಶ್ರೀಕೃಷ್ಣನಿಗೆ 'ಮಸಗುವ ಸುಗಂಧಾಂಗಿಯನ್ನು ಮೆಚ್ಚದಿರೆ ಏಸಗುವ ಕುಗಂಧಾಗಿ ಮತ್ಸ್ಯನಾಗು' ಎಂದು ಹತ್ತು ಅವತಾರಗಳಲ್ಲಿ ಹುಟ್ಟುವಂತೆ ಶಾಪಕೊಟ್ಟಳು. ತನ್ನನ್ನು ಹುಟ್ಟಿಸಿದ ಬ್ರಹ್ಮನಿಗೆ ಅವನ ಪಟ್ಟದ ರಾಣಿ ಅವನಿಯೊಳು ತಿರಿ ತಿನಲಿ, ಅವನ ಸಹೋದರಿ ಶಿವನ ಸೇರಲಿ ಅವನ ಸುತನಿದ್ದಲ್ಲಿ ಕಲಹ ಬರಲಿ, ಅವನ ಪೂಜಿಸಬೇಡ, ಅಖಿಳಲೋಕದ ಜನರು ಅವನ ಪಟ್ಟಕ್ಕೆ ಮುಂದೆ ಹನುಮ ಬರಲಿ ಎಂದು ಶಾಪವಿತ್ತಳು. ಏನಾದರೇನು 'ನವಮಲ್ಲಿಕಾಶರ'ದ ಹತಿಯನ್ನು ತಾಳಲಾರದಾದಳು. ತನ್ನ ಮಗನೇ ಆದರೂ ಈ ರೀತಿ ಪೀಡಿಸುವ ಪಾಪಿ ಮದನನನ್ನು ಶಪಿಸಿದಳು. "ನೆರೆದಂಡಲೆವ ಮಾರ ಉರಿದು ಬೀಳೆಲೋ ನೀನು" ಪರರ ಪ್ರಪಂಚದಲಿರಲಿ ಕೋಗಿಲೆಗಳು ಸ್ವರನಕಟ್ಟು ಗಾಣದಲಿ ಬೀಳಲಿ, ಅವನ ಸರಳುಗಳು ಮದ್ದಾನೆ ಮುರಿಯಲಿ' ಅರಗಿಳಿಯು ಪಂಜರದೊಳಿರಲಿ ಇರ ಬಾಳನನ್ನು ರಾಹು ತಡುಕಲಿ ಈ ಕ್ಷಣದಿ ಮರಿದುಂಬಿಗಳು ಕಮಲದೊಳು ಮುಚ್ಚಲಿ'.

ಏನಾದರೇನು? ಕಾನನಕೆ ಕಾತ ಬೆಳದಿಂಗಳಂತೆ ಎನ್ನ ಯೌವನವು ವ್ಯರ್ಥವಾಯಿತು. ಎಂದು ಸಖಿಯರಲ್ಲಿ ಮೊರೆಇಟ್ಟಳು ಸತ್ಯಭಾಮೆ. ಕಡೆಗೆ ಸತ್ಯಭಾಮೆ ತಾನೇ ಹೋಗಿ ತನ್ನ ರೂಪಮೋಹದಿಂದ ಅವನನ್ನು ಕಟ್ಟಿ ತರಬೇಕೆಂದು, ಲೋಕಮೋಹವಾಗುವಂತೆ ಸಿಂಗರಿಸಿಕೊಂಡು ಅಂದಣವನ್ನೇರಿ ಗೆಳತಿಯರ ಬಳಗದೊಂದಿಗೆ ರುಕ್ಮೀಣಿ ಮಂದಿರಕ್ಕೆ ಬರುವಳು.

ಬಂದು ಅರಮನೆಯಲ್ಲಿ ಎಂಥ ದೃಶ್ಯ! ರುಕ್ಮೀಣಿಯೊಂದಿಗೆ ಶ್ರೀಕೃಷ್ಣನು ಲೆತ್ತದಾಟಮತ್ತು ಸರಸ ಕೇಳಿಯಲ್ಲಿ ಮಗ್ನನಾಗಿದ್ದಾನೆ. ಸತ್ಯಭಾಮೆ ಎದುರು ನಿಂತರೂ ಮಾತಾಡಿಸಲಿಲ್ಲಾ. ಈ ಅವಮಾನ ಸಹಿಸುವುದು ಹೇಗೆ? ಕ್ರೋಧ ನೆತ್ತಿಗೇರಿ ಸೂರೆಹೋಯಿತು. ಮಾನ ಸರಿ ಗರತಿಯರೊಳೆಂದು ಎಚ್ಚರತಪ್ಪಿ ಬೀಳುತ್ತಿರುವಾಗ ಶ್ರೀಕೃಷ್ಣ ಬಂದು ಅವಳನ್ನು ಎತ್ತಿ ಉಪಚರಿಸುವನು.

ಅನಂತರ ಅವಳಿಗೆ ಪ್ರಜ್ಞೆ ಬಂದ ಮೇಲೆ ಸವಿಯಾದ ಮಾತುಗಳಿಂದ ಸಂತೈಸಿದನು. ಈ ಎಲ್ಲ ಉಪಚಾರವೆಲ್ಲ ಕೇವಲ ನಾಟಕವಾಗಿ ತೋರಿತು ಸತ್ಯಭಾಮೆಗೆ. ಆಗ ಎದ್ದು ರುಕ್ಮೀಣಿಯನ್ನು 'ಆ ಮಾಯಾವಿ ಸವತಿಯನ್ನು ಸಕ್ಕರಿಯೊಳಗಿನ ಚೂರೇ ರುಕ್ಮೀಣಿ' ಎಂದು ಬೈದು, ಶ್ರೀಕೃಷ್ಣನಿಗೆ ಎಲೋ ಕೃಷ್ಣ ಹೆಂಗಳೆಯರ ಉಸಿರು ಒಳಿತಲ್ಲ. ನನ್ನ ಈ ಸೊಗಸು ಈ ಒನಪು ಈ ಸರ್ವ ಶೃಂಗಾರ ಕಾಸು ಬಾಳದು, ನಿನ್ನನ್ನಗಲಿ ಓರ್ವಳು ಇರಲು, ಇನ್ನು ಮೇಲೆ ನಾನು "ಅನ್ನೋದಕವಕೊಂಡರೆ ನಿನ್ನ ಪಾದಲೇ ಸಾಕ್ಷಿ" ಬೆನ್ನು ಹಚ್ಚೇನು ಹಾಸಿಗೆಗೆ ಇದೇ ಎನಗೆ ದೀಕ್ಷೆ ಬಿಳಿಯ ವಸ್ತ್ರವನ್ನುಟ್ಟು ಭಸಿತವನೆ ಪೂಸಿ, ಪುಲಿಚರ್ಮವನು ಆಸನವ ಮಾಡಿ, ಶಕ್ತಿ ಪೂಜೆಗೈದು, ಛಲದಿಂದ ನಿನ್ನ ಒಲಿಸದಿದ್ದರೆ, ನಿನ್ನ ಲಲನೆಯಲ್ಲವ್ರೋ! ಸತ್ಯಭಾಮೆಯೆಂಬ ಹೇಸರೇಕೆ? ನಿನ್ನ ಕಲ್ಲಿನಂಥ ಮನಸ್ಸು ಬೆಣ್ಣೆ ಎಂತೆ ಕರಗಿಸಿದಿದ್ದರೆ ನಾನು ಹೆಣ್ಣೆ?

"ಕಣ್ಣು ಹುಬ್ಬಿಗೆ ನೋಡು ಕಡುದೂರವಿಲ್ಲ" ಎಂದು ಬಿಟ್ಟ ಬಾಣದಂತೆ ಬಿರ್ರನೇ ಹೊರಟು ಬಿಟ್ಟಳು.

ಮನೆಗೆ ಬಂದು ಸ್ನಾನವನ್ನು ಮಾಡಿ ಸ್ವೇತಾಂಬರವನ್ನು ತೊಟ್ಟು ಧೂರ್ಜಿಟಿಯ ಸತಿಯ ಆರಾಧನೆಗೆ ತೊಡಗಿದಳು. ನಾನಾ ರೀತಿಯಲ್ಲಿ ಪೂಜೆಯನ್ನು ಮಾಡಿ, ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದಳು. 'ಜಗದಂಬೆ' ಮಗಳ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷಳಾಗಿ ಕೊಟ್ಟೆನೊರವ ಸತ್ಯಭಾಮಿನಿ; ಅಂಜಬೇಡ, ವರವನ್ನು ಕೊಡುತ್ತೇನೆ, 'ಕಂಜವದನ ಕೃಷ್ಣನನ್ನು ನಿನ್ನ ಕೈಲಿಕೊಟ್ಟೆನೇ ಎಂದು ವರವಿತ್ತಳು. ಅನಂತರ ಸತ್ಯಭಾಮೆಯ ಆ ಆದಿಶಕ್ತಿಯನ್ನು ಸ್ತುತಿಸಿ, ನಮಸ್ಕರಿಸಿ, ಅವಳನ್ನು ಬೀಳ್ಕೊಟ್ಟಳು. ಆ ಮೇಲೆ ಅರಮನೆಯಲ್ಲಿ ತಾನು ಶೃಂಗರಿಸಿಕೊಂಡು ದೂತಿ ಸೇವಕಿಯರೊಂದಿಗೆ ಶ್ರೀಕೃಷ್ಣನ ಬರುವ ದಾರಿಯನ್ನು ನೋಡುತ್ತಿದ್ದಳು.

ಜಗದಂಬೆಯ ವರದಿಂದ ಶ್ರೀಕೃಷ್ಣನ ಮನಸ್ಸು ಬದಲಾಯಿತು. ತಾನು ಸತ್ಯಭಾಮೆಯನ್ನು ಅವಮಾನಿಸಿದ್ದು ಸರಿಯಲ್ಲವೆಂದು ಆತನ ಮನಸ್ಸು ಪರಿಪರಿಯಾಗಿ ಮರುಗತೊಡಗಿತು. ಪಶ್ಚಾತ್ತಾಪದಿಂದ ನೊಂದ ಶ್ರೀಕೃಷ್ಣ ತಾನೇ ಹೋಗಿ ಮಾನಿನಿಯ ಮನ ತಿಳಿದುಬರಬೇಕೆಂದು 'ಕೊರವಂಜಿ'ಯ ರೂಪ ಧರಿಸಿದ. ಶ್ರೀಕೃಷ್ಣನೆ ರೂಪಧಾರಣ ಮಾಡಿದ ಮೇಲೆ ಕೇಳಬೇಕೆ? ಅನುಪಮ ಸುಂದರಿಯಾದ ದೇವಲೋಕದ ಕೊರವಂಜಿ 'ಕೇರಿ ಕೇರಿಯಾಳಾಡುತ್ತಾ ಪಾಡುತಾ, ವೈಯಾರದಿ ಮನೆ ಮನೆ ತಿರುಗುತ್ತಾ ನಾರಿಯರಿಗೆ ಶಕುನವ ಹೇಳುತ್ತಾ, ಸುಖವನು ಸಾರುತ್ತಾ, ದ್ವಾರಕಿಯ ದಾರಿಯಲ್ಲಿ ಹೊರಟಳು. ಇವಳ ಕೀರ್ತಿ ಪರಿಮಳ ಭಾಮೆಯ ಮಂದಿರಕ್ಕೂ ಹರಡಿತು. ಸಖಿಯರು "ಕೊರವಿ ಬಂದಳಮ್ಮ ಈ ಪುರದೊಳಗೆ

ನೆರೆದ ಜನವೆಲ್ಲ ಒಂದನು ಅರಿಯದಾಗಿದೆ ರೂಪದಲಿ, ಪಾರ್ವತಿಯೋ, ಜಗದಂಬೆಯೋ! ಆ ಪುಣ್ಯವಚನದಿ ವಾಣಿಯೋ, ಬ್ರಹ್ಮಾಣಿಯೋ, ತ್ರಿಪುರ ಸುಂಧರಿಯೋ, ಸ್ವರ್ಣ ಬೊಂಬೆಯೋ ಎಂದು ತಿಳಿಸುವರು.

ಕೊರವೆಂಬುವ ಸುದ್ದಿ ಕೇಳುತ ಅಂಬುಜಲೋಚನೆ ಕರೆ ಕರೆಯಂದಟ್ಟಿದಳು ಸಖಿಯರನು. ಅತಿ ವೇಗದಲ್ಲಿ ಕೊರವಿ ಸಿಂಗಾರ ಕೋಲನ್ನಾಡುತ್ತ ಶ್ರೀಕೃಷ್ಣನ ಬಾಲಲೀಲೆಗಳನ್ನು ಹಾಡುತ್ತ ಸತ್ಯಭಾಮೆಯ ಮಂದಿರಕ್ಕೆ ಬಂದಳು. ಮಾನಿನಿಯಳ ಹೃದಯ ಕದಡುತ್ತ ಬಂದಳು. ಬೆದರಿದೆರಳೆಯಂತೆ ಆಕಡೆ ಈಕಡೆ ನೋಡುತ್ತ ಬಂದಳು. ಮಡಿಲಲ್ಲಿರುವ ಮಗುವನ್ನು ಎತ್ತಿ ಮುದ್ದಾಡುತ್ತ ಬಂದಳು, ಮಧುರ ಮಾವಿಗೆ ಶುಕ (ಗಿಳಿ) ನೊದಗಿ ಬಂದಂತೆ ಬಂದಳು.

ಕೊರವಿಯನು ಕಾಣುತ್ತಲೇ ಸತ್ಯಭಾಮೆಯ ಅಂತರಂಗದ ತಾಪ ಉಜ್ವಲಿಸಿತು. ಇವಳೇನು ಕೊರವೇ ಮನ್ಮಥನ ಶರವೆ? ಎಂದು ಬೆರಗಾದಳು. ಪುರುಷರಲ್ಲಿ ಮನವೆರಗಬಹುದು. ದೇಶ ಸಂಚಾರಿ ಸ್ತ್ರೀಯಲ್ಲಿ ಮನವೆರಗಬಹುದೆ? ಏನಾಶ್ಚರ್ಯ! ಸತ್ಯಭಾಮೆಯ ಮನದ ಕದಡುವಿಕೆಯನ್ನು ಸಂಯಮಿಸಿಕೊಂಡಳು. ಧನ್ಯಳಾದೆನೆ ಕೊರವಿ, ನಿನ್ನ ರೂಪವ ಕಂಡು, ರನ್ನೆ ಶಿವಸತಿಯೋ ನೀನೆಂದು ಕರೆಸಿದನೇ ಎನ್ನ ಮನದೊಳಿದ್ದುದ ಹೇಳೆ? ನೀನಾವ ದೇಶದವಳು? ಪತಿಯಾರು? ಯಾವ ಜನಪದದ ಕೊರವೆ? ಎಂದು ಕೊರವೆಯನ್ನು ಸತ್ಯಭಾಮೆ ಕೇಳಿದಳು.

ಆಗ ಕೊರವಿಯು ಕೊಡುವ ಉತ್ತರ ಈ ರೀತಿಯಾಗಿದೆ. "ಗಂಡಸರೆನಗಿಲ್ಲ, ಹೆಂಡಿರನಾಳುವೆ", 'ಗಂಡುಗಾದೇವಿ' ನಾರಾಯಣಿಯೆಂಬೊರು ಎನ್ನ. ಥಂಡ ಥಂಡದ ದೇವದೈತ್ಯರ ಕೈಯ ಪೂಜೆಗೊಂಬ ಹೆಂಗಳ ಗಾಡಿಕಾರ್ತಿ ಕೊರವಂಜಿ ನಾನು ಎಂದು ಹೇಳುವಳು.

ಆಗ ಕೊರವಂಜಿಯ ಸತ್ಯಭಾಮೆಯನ್ನು ಕುರಿತು ವರ್ಣಿಸಿದ ಬಗೆ ಥೆಳ್ಳಾನ ಹೊಟ್ಟೆವಳೆ, ತಾವರೆಯ ಮೊಗದೊವಳೆ, ಬಳ್ಳ ಬಳಕು ಉಂಗ್ರ – ನಡುವಿನೊಯ್ಯಾರಿ, ಬೆದರಿದ ವನಜಾಕ್ಷಿ, ಮದನ–ಕದನಾಪೇಕ್ಷಿ ಎದುರಿಲ್ಲ ನಿನ್ನ ಸೌಂದರ್ಯಕ್ಕೆ ಎಂದು ಸತ್ಯಭಾಮೆಯನ್ನು ಬಣ್ಣಿಸಿದಳು. ಆ ಮೇಲೆ ಕೊರವಿಯು ಈ ಕೆಳಗಿನಂತೆ ಹೇಳುವಳು.

ಸಾಮುದ್ರಿಕೆಯ ಬಲ್ಲೆ, ಶಕುನ ಹೇಳಲು ಬಲ್ಲೆ, ಪ್ರೇಮದಿಂ ಬಿಟ್ಟ ಗಂಡನ್ನ ಒಲಿಸಿ ಕೊಡಬಲ್ಲೆ, ಕೆಟ್ಟ–ಸವತಿಯ ಬಾಯಿ ಕಟ್ಟು ಮಾಡಲು ಬಲ್ಲೆ ಎಂದು ತನ್ನ ಶಕ್ತಿಯನ್ನು ವಿವರಿಸುವಳು. ಅಲ್ಲದೇ ನಾನು ತಿರಿಕೊಂಬ ಕೊರವಿ ನಾನಲ್ಲ. ಖರೇ ಬಂದರೆ ಮಾತು ಕರೆದು ಕೊಡು ನಿನಗೆ ತಿಳಿದಿದ್ದು. ದೊರೆಸಾನಿ ಯಾವುದರಲ್ಲಿಯು ನನಗೆ ಕೊರತೆಯಿಲ್ಲ. ಪರಹಿತಾರ್ಥಕ್ಕೆ ವೇಷಧರಿಸಿ ತಿರುಗುವೆನು. ಬ್ಯಾಸರ ಮಾಡಿಕೊಳ್ಳದೆ ಕೇಳಿದರೆ ಬೆಳತನಕ ಹೇಳುವೆನು? ಎಂದು ಗುಣ–ಸ್ಥಿತಿ–ಸ್ವಭಾವಗಳನ್ನು ಸತ್ಯಭಾಮೆಗೆ ಪರಿಚಯ ಮಾಡಿಕೊಡುವಳು.

ತಾನು ಇಲ್ಲಿಯವರೆಗೆ ತಿರುಗಾಡಿದ ಬಗೆಯನ್ನು ವಿವರಿಸುವಳು. ಈ ಬ್ರಹ್ಮಾಂಡ ವಿಸ್ತಾರವನ್ನು ವಿವರ-ವಿವರವಾಗಿ ತಿಳುಹಿದಳು. ಅನಂತರ ಅವಳನ್ನು ಹತ್ತಿರ ಕರೆದು ಕುಳ್ಳಿರಿಸಿ, ಕಣಿ ಹೇಳಲು ಮೊದಲು ಮಾಡಿದಳು.

ಕೊರವಂಜಿಯು ಮೊದಲು ತನ್ನ ಕುಲದೈವಗಳೆಲ್ಲ ಸ್ಮರಿಸಿ, ನಿನ್ನ ತಪಕ್ಕೆ ಮೆಚ್ಚಿ, ಕಾಳಿಯು ಅಭಿಷ್ಟೆ ಪೂರೈಸುವಂತೆ ವರವ ಕೊಟ್ಟಳು. 'ಕಣಕ ತುಪ್ಪದಿ ಬಿತ್ತು' ಸಂದೇಹ ವ್ಯಾತಕೆ, ಸಿಂಧುರಗಮನೆ? ಇಂದು ಯೋಗವು ಬಂದು ನಿಂತಿದೆ. ಬಂದನೆಂದು ತಿಳಿಯೆ, ಸ್ಮರನ ಮಾತಿನ ಗಿಳಿಯೆ ಎಂದು ಕೊರವಿ ಸತ್ಯಭಾಮೆಗೆ ಮರ್ಮದ ಮಾತನ್ನು ಹೇಳುವಳು.

ಆಗ ಸತ್ಯಭಾಮೆ ಕೊರವಿಗೆ ಹೇರಳವಾಗಿ ಮುತ್ತು-ರತ್ನಗಳನ್ನು ಕೊಟ್ಟು, ಹೊಟ್ಟೆ ತುಂಬ ಊಟಮಾಡಿಸಿದಳು. ಕೊರವಿ ಬೇಡಿ, ಕಾಡಿ ಹಾಸ್ಯ ಮಾಡಿ, ತನ್ನ ಪರಿವಾರದವರಿಗೂ ಒಂದಿಷ್ಟು ಅನ್ನವನ್ನಿಟ್ಟುಕೊಂಡು ಕಡೆಗೆ ದಿಟ್ಟವಾಗಿ ಪೇಳುವೇನು ದಿವಿಜರೊಡೆಯ ಘಟ್ಯಾಗಿ ಬರುವನು. ಹೊತ್ತುಯಿತು ನಾನು ಪಟ್ಟಣಕ್ಕೆ ಹೋಗುವೇನು ಎಂದು ಹೇಳಿ ವೈಯಾರದಿಂದ ಬಿರಬಿರನೇ ನಡೆದಳು. ಆ ಕೊರವಿ ನೇರವಾಗಿ ರುಕ್ಮಿಣಿಯ ಮಂದಿರಕ್ಕೆ ಬಂದಳು. ಲಕ್ಷ್ಮೀ ಸ್ವರೂಪಳಾದ ರುಕ್ಮಿಣಿ ಇದನ್ನರಿತಿದ್ದವಳೆ ಪರಮ ಪ್ರೀಯ ಪರಮಾತ್ಮನನ್ನು ಆರತಿಯನು ಬೆಳಗಿ ಕೊರವಿಯನ್ನು ಸ್ವಾಗತಿಸಿದಳು. ಆನಂತರ ಶ್ರೀಕೃಷ್ಣನು ಮಂಗಳ ಸ್ನಾನವನ್ನು ಮಾಡಿ, ಸಿಂಗರಿಸಿಕೊಂಡು ಪ್ರಾಣದರಸಿ ರುಕ್ಮಿಣಿಯನ್ನು ಕರೆದು 'ಬಡನಡುವಿನ ಜಾಣೆ, ಮಡದಿ ಮೃದವಾಗಿ, ಕೇಳು, ಸಿರಿ ಸತ್ಯಭಾಮೆಯ ಗೃಹ ಸೇರಿ ಇಂದಿನಿರುಳಿದ್ದು ನಾಳೆ ಬರೆವೆನು. ನಾರಿ ಅಪ್ಪಣೆ ಕೊಡೆ ಎಂದು ಬೇಡಿಕೊಂಡನು. ಆಗ ರುಕ್ಮಿಣಿಯು ನಾನು ಬೇಡವೆಂದೆನೆ? ನೀನೇ ಎನ್ನನು ಬೇರೆ ಮಾಡಿ, ನಟಿಸಿ ಆಡಿದೆ, ಪರದೈವವೇ ಕಾಣಬಂದಿರೆ ಕನ್ನಡಿಯಾತಕೆ? ನಿನ್ನ ರಜಗಜದೊಳು ನಾನು ವಾಸವನ್ನು ಮಾಡಿದೆ. ನಾರಿ ಮನೆಗ್ಹೋದರೇನು, ಪ್ರಾಣನಾಯಕಾ, ನಾನು ಮನೆಗೆ ಹೋಗುತ್ತೇನೆ ಎಂದಳು. ಆಗ ಶ್ರೀಕೃಷ್ಣನು ಗರುಡನ ಹೆಗಲೇರಿ ಸತ್ಯಭಾಮೆಯ ಮಂದಿರಕ್ಕೆ ಬಂದು ಬಾಗಿಲ ಬಳಿ ಬಂದು ನಿಂತ. ಸತ್ಯಭಾಮೆಯ ಅಭಿಮಾನ ಜಾಗ್ರತವಾಯಿತು. ಜಗದಂಬೆಯಿತ್ತ ಪರದ ಧೈರ್ಯವೂ ಇದ್ದಿತು. ತಾನೇ ಅವನಲ್ಲಿಗೆ (ಕೃಷ್ಣ) ಹೋದಾಗ, ಮಾತನಾಡಿಸದ ಬಿಂಕಕ್ಕೆ ಬಿಂಕ ತೋರಿಸಬೇಕೆಂದು ಛಲ ಅವಳಲ್ಲಿ ಅಂಕುರಿಸಿತು.

ಹೊರಗಿಂದ ಶ್ರೀಕೃಷ್ಣನು ತಾವರೆ ಗಂಧಿಯೆ ಬೇಗನೆ ಕದವ ತೆರೆಯೇ! ಎಂದು ಕೇಳಿದರೆ ದಾವಾತಾ ನೀನಯ್ಯಾ? ದುಡುಕು ಮಾಡಲಿ ಬ್ಯಾಡಾ, ನೀವು ಹೇಳಿರಿ ನಿಮ್ಮ ಹೆಸರೇನು? ಎಂದು ಕೇಳಿದಳು.

**ಶ್ರೀಕೃಷ್ಣ – ವಾರಿಯೊಳಗೆ ಪೊಕ್ಕು ವೇದವ ತಂದಿತ್ತೆ**
**ಧೀರಾ ಮತ್ಸನುದಾರ ದುಂಡೀ**

| | | |
|---|---|---|
| ಸತ್ಯಭಾಮೆ | – | ಧೀರ ಮತ್ಸ್ಯನು ನೀನಾದರೊಳ್ಳಿತು ನಡೆ<br>ನೀರಿನೊಳಗೆ ಇರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ಶರಧಿಯ ಮಥಿನಿಸಿ ಸುರರಿಗೆ ಅಮೃತವಾ<br>ಕರದಿ ನೀಡಿದ ಕೂರ್ಮನ ಕಾಣೇ |
| ಸತ್ಯಭಾಮೆ | – | ಕರದಿ ನೀಡಿದ ಕುರ್ಮನಾದರೊಳ್ಳಿತು ನಡೆ<br>ಸರಸಿಗೊಳಿರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ಮತ್ತ ದೈತ್ಯನ ಕೊಂದು ಮುದದಿ ಭೂಮಿಯ ತಂದೆ<br>ಸತ್ಯವರಹಾನೆ ಸರಿಸೀ ಜಾಕ್ಷೀ |
| ಸತ್ಯಭಾಮೆ | – | ಸತ್ಯವರಾಹ ನೀನಾದರೊಳ್ಳಿತು ಶಿರವಾ<br>ಎತ್ತದೆ ತಿರುಗುತಿರು ಹೋಗೈಯಾ ಹೋಗು |
| ಶ್ರೀಕೃಷ್ಣ | – | ಬಾಲಕನಾಗಿ ನಾ ಬಂದು ರಕ್ಕಾಸನಕೊಂದೆ<br>ಲೀಲೆ ನರಸಿಂಹ ನಾ ಲಲಿತಾಂಗಿ |
| ಸತ್ಯಭಾಮೆ | – | ಲೀಲೆ ನರಸಿಂಹ ನೀನಾದರೊಳ್ಳಿತು<br>ಮೇಲಾದ ಗಿರಿಯೊಳಿರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ಪುಟ್ಟ ವಾಮನನಾಗಿ ಪೊಡವಿಯಳೆದು ಬಲಿಯಾ<br>ಮೆಟ್ಟಿದೆ ಕಾಣೆ ಮೋಹನಾಂಗಿ |
| ಸತ್ಯಭಾಮೆ | – | ಮೆಟ್ಟಿದಕೊಳ್ಳಿತು ನಡೆ ನಡೆ ಋಷಿಗಳಾ<br>ದಟ್ಟ ಇದ್ದಲ್ಲಿ ಇರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ತಂದೆ ವಚನವ ಕೇಳಿ ತ್ವರಿತದಿ ಮಾತೆಯ<br>ಕೊಂದೆ ಭಾರ್ಗವ ಕಾಣೆ ಕೋವಿದಳೇ |
| ಸತ್ಯಭಾಮೆ | – | ಕೊಂದ ಭಾರ್ಗವ ನೀನಾದರೊಳ್ಳಿತು ಮುನಿಯಾ<br>ವೃಂದವಿದ್ದಲ್ಲಿ ಇರು ಹೋಗೈಯಾ ಹೋಗು |
| ಶ್ರೀಕೃಷ್ಣ | – | ಮಾನಿನಿಗಾಗಿ ಮರೆತಾ ರಾಮಾನಾ ಕೊಂದೆ<br>ಜಾಣರಾಮನೆ ಜಲಜಾಮುಖಿಯೇ |
| ಸತ್ಯಭಾಮೆ | – | ಜಾಣರಾಮ ನೀನಾದರೊಳ್ಳಿತು ಗುಂಪು<br>ವಾನರರೊಳಗಿರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ಇದ್ದಾ ಗೋವಳಾರೋಳು ಎಲ್ಲಾ ಪರಿಯಾಡಿದೆ<br>ಮುದ್ದು ಕೃಷ್ಣನೆ ನಾ ಮಾನಿನಿಯೇ |
| ಸತ್ಯಭಾಮೆ | – | ಮುದ್ದು ಕೃಷ್ಣ ನೀನಧರೊಳ್ಳಿತು ಬೆಣ್ಣೆ<br>ಕದ್ದು ತಿನ್ನುತಲಿರು ಹೋಗೈಯ್ಯಾ ಹೋಗು |
| ಶ್ರೀಕೃಷ್ಣ | – | ಬತ್ತಲೆಯಾಗಿ ಬಾಲೇರ ವ್ರತಗೆಡಿಸಿದೆ<br>ಸತ್ಯಾ ಬೌದ್ಧನೆ ಸುಜಾಣೆ |

| | | |
|---|---|---|
| ಸತ್ಯಭಾಮೆ | – | ಸತ್ಯ ಬೌದ್ಧನು ನೀನಾದರೆ ಗುಡಿಯೊಳು |
| | | ನಿತ್ಯ ತೋರುತಲಿರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ಚೆಲುವಾ ತೇಜಿಯಸೇರಿ ಚದುರಾದಿ ನಡೆಸಿದೆ |
| | | ಕಲಿಕ್ಯಾವತಾರಾ ಕಾಮಿನಿಯೇ |
| ಸತ್ಯಭಾಮೆ | – | ಕಲಿಕ್ಯಾವತಾರಾ ನೀನಾದರೆ ರಾಹುತರಾ |
| | | ಉಲಹಿದ್ದಲ್ಲಿ ಇರು ಹೋಗಯ್ಯಾ ಹೋಗು |
| ಶ್ರೀಕೃಷ್ಣ | – | ಭೂಮಿಯೊಳ್ಳಿಪುರಿ ಭೀಮನೊಡೆಯಕಾಣೆ |
| | | ಭಾಮಿನಿ ಬಾಗಿಲಾ ತೆರಿಯೇ |
| ಸತ್ಯಭಾಮೆ | – | ಸ್ವಾಮಿ ಕರುಣಿಸು ಎಂದು ಶರಣೆಂದು ಪಾದಕ್ಕೆ |
| | | ಪ್ರೇಮದಿ ಬಂದು ಎರಗೀದಳು. |

ಈ ಪ್ರವೇಶದಲ್ಲಿ ಶ್ರೀಕೃಷ್ಣನು ಹತ್ತು ಅವತಾರಗಳ ಪರಿಚಯ ನೀಡುತ್ತಾನೆ. ಇಲ್ಲಿ ಶ್ರೀಕೃಷ್ಣ – ಸತ್ಯಭಾಮೆಯರ ನಿಷ್ಠುರದ ಪ್ರಶ್ನೋತ್ತರಗಳು ತೂರಿ ಬರುತ್ತವೆ. ಹಳ್ಳಿಯ ರಸಿಕ ಪ್ರೇಕ್ಷಕರಿಗೆ ಇದು ಎಂತಹ ರಸದೂಟ! ಹಾಸ್ಯವೂ ಹೌದು. ರೋಮಾಂಚನಕಾರಿಯಾದ ಶೃಂಗಾರವೂ ಹೌದು. ಕೊನೆಗೆ ಶ್ರೀಕೃಷ್ಣನು – 'ಭುಮಿಯೋಳು ಅಲ್ಲೀಪುರಿ' ಭೀಮನೊಡೆಯ ಕಾಣೆ 'ಭೂಮಿನೀ ಬಾಗಿಲ ತೆರೆಯೇ' ಎಂದಾಗ ಇನ್ನು ಸೆಡವು ಸಾಕು, ಅತಿಯಾಗಬಾರದೆಂಬ ಭಾವದಿಂದಲೋ ಏನೋ ಬಾಗಿಲ ತೆರೆದು ಸ್ವಾಮಿ ಕರುಣಿಸು ಎಂದು ಶ್ರೀಕೃಷ್ಣನನ್ನು ಬೇಡಿಕೊಳ್ಳುವ ದೃಶ್ಯ ಮನೋಹರ ಹಾಗೂ ಭಕ್ತಿಯ ಉತ್ತುಂಗವನ್ನು ತೋರಿಸುತ್ತದೆ. ಅನಂತರ ಸತ್ಯಭಾಮೆಯನ್ನು ಪ್ರೇಮದಿಂದ ಹಿಡಿದೆತ್ತಿದನು. ಪರಮ ಪತಿವ್ರತೆಯಾದ ಸತ್ಯಭಾಮೆಗೆ ಶ್ರೀಕೃಷ್ಣನ ಮನ ಮೆಚ್ಚಿದ ಮಾತೇ ಸಾಕಾಯಿತು. ಅವಳ ಅಂತರಂಗ ಪ್ರೇಮಭಾವದಿಂದ ತುಂಬಿ ತುಳುಕಿ ಹೋಯಿತು. ಹಿಂದಿನದೆಲ್ಲವೂ ಮರೆತು ಹೋಯಿತು. ಇವರ ನಡುವೆ ನಡೆದ ಸರಸ ಸಲ್ಲಾಪಗಳು ರಸಿಕರನ್ನು ರಂಜಿಸುವಂತಹದು. ಆಗ ಶ್ರೀಕೃಷ್ಣನು – ಒಂದು ಹೂವಿಗೆ ಮನ ಮುರಿಯುವುದೇ? ತಂದು ಕೊಡುವೆ ವೃಕ್ಷವನು ಚಂದಿರವದನೆ ನಿನ್ನ ಮಾನಾಪಮಾನ ನನ್ನದು ಕಾಣೆ, ಖಚಿತವಾದರೆ ಎನ್ನ ವಚನವನ್ನು ನಂಬು ಎಂದು ಪ್ರೀತಿಯಿಂದು ಸತ್ಯಭಾಮೆಯನ್ನು ಮೆಚ್ಚುಸುವನು. ಮುನಿಸು ಎಲ್ಲಿಯೋ ಮಾಯವಾಯಿತು. ರಾತ್ರಿಯೆಲ್ಲ ಅನಂಗರಂಗನ ಮದನ ಕೇಳಿ ಮರುದಿನ ಬೆಳಿಗ್ಗೆ ಮಾನಿನಿ ಎದ್ದು ಶುಚಿಯಾಗಿ ಪ್ರಾಣಕಾಂತನಾದ ಪುರುಷೋತ್ತಮನಿಗೆ ವಂದಿಸಿ, ಭಕ್ತಿಯ ಬೆಳಕು ಕರುಣಿಸು ಎಂದು ಬೇಡಿಕೊಂಡಳು. ಶ್ರೀಕೃಷ್ಣನವರಾ ಭಕ್ತಿಯ ರೀತಿಯನ್ನು ಆ ಭಕ್ತಿಗಳಿಗೆ ಹೆಸರಾದ ಭಕ್ತರ ಚರಿತ್ರೆ ಮಹಿಮೆಗಳನ್ನು ಮನಮೆಚ್ಚುವಂತೆ ಹೇಳಿದನು. ಭಕ್ತಿಯಿಂದ ಸತ್ಯಭಾಮೆಯು ಶ್ರೀಕೃಷ್ಣನ ಪೂಜೆ ಮಾಡಿದಳು. ಇದೇ ಸಮಯದಲ್ಲಿ ದೇವೇಂದ್ರನು ಧರೆಗಿಳಿದು ಬಂದು ಮಂದರಧರ ಮುಕುಂದ ಪಾಲಿಸೆಂದು ಕರ ಮುಗಿದು ನಿಂತು, ತನ್ನ ಗೋಳನ್ನು ಹೇಳಿಕೊಂಡನು. ಮೂರನು ನರಕನೂ, ಉನ್ಮತ್ತರಾಗಿ ಸುಮನಸರ ಸೌಭಾಗ್ಯ ಕೆಡಿಸಿ ಮಂಡಲಕೆ ಯೋಗ್ಯವಾದ ಸತ್ತಿಗೆಯನ್ನು ಎನ್ನ ಮಾತೆಯ ಕುಂಡಲಗಳನ್ನು ಸುಲಿದೊಯ್ದರು, ಕುಂಭಿಣಿಯ ಅರಸುಗಳು ದಿಂಡುಗೆಡಹಿದರು. ಜೀವಿಸುವುದರಿದಾಯ್ತು ಜೀಯಾ ಎಂದು ತನ್ನ ಬನ್ನವನ್ನರುಹಿದನು. ಶ್ರೀಕೃಷ್ಣನು ಇಂದ್ರನನ್ನು ಸಂತೈಸುತ್ತ

ನಾಳಿನ ದಿನದೊಳಗೆ ಅವನು ಕೋಪದಿಂದಲಿ ಸೀಳಿಜವನಾಲಯವನ್ನು ಪೊಗಿಸುವೆನು ಎಂದು ಹೇಳಿ ಅವನನ್ನು ಕಳುಹಿಸಿದನು. ಕೂಡಲೆ ಗರುಡನನ್ನು ಸ್ಮರಿಸಿದ ಧನುಜದಾರಿ ವಿಹಗಪತಿ ಚಕ್ಕನೆ ಬಂದು ಪಕ್ಕವನೆ ಪಸರಿಸಿ ನಿಂತ.

ಗರುಡವೇರಿದ ಗಂಗಾಜನಕಾ ಸತ್ರಾಜಿತ ಕನ್ಯ ಸತ್ಯಭಾಮೆಯ ಸಹಿತ ಅರಿಗಳ ಕೆಣಕಾ ಕಲ್ಪಾಂತ ಕಾರಿಯಾದ ಯುದ್ಧ ವೀರನ ರೂಪ ಅದ್ಭುತವಾಗಿದ್ದಿತು. ದಿವ್ಯವಾಹನನಾದ ಗರುಡನು ಹಾರಿದ ತನ್ನ ಸತ್ವ ತೋರಿದ ಬಿಂಕಬೀರಿದ ಕೆಲವೇ ನಿಮಿಷಗಳಲ್ಲಿ ಸ್ವಾಮಿಯು ಹಿಮಗಿರಿಯ ಮಂಡೆಯ ಮ್ಯಾಲಿದ್ದ ಪುಂಡರ ಗ್ರಾಮವನ್ನು ಉದ್ದಂಡ ಪ್ರಾಗ್ಜ್ಯೋತಿಷ ಮಂಡಲವನ್ನು ಕಂಡನು.

ಶಂಕ, ಚಕ್ರ, ಗದಾಧಾರಿಯಾಗಿ ಗರುಡವಾಹನನ್ನು ಉರಿದೆದ್ದರೆ, ಯಾವ ಲೋಕ ಉಳಿಯಲು ಸಾಧ್ಯ, ಮುರಧರನು ಮುರಿದು ಬಿದ್ದನು. ನರಕನು ನರಕವನ್ನೇ ಸೇರಿದನು. ಪುರಂದರವ್ರಾತ ಹೂ ಮಳೆಯನ್ನು ಕರೆಯಿತು.

ದೇವೇಂದ್ರನು ಸತ್ತಿಗೆಯನ್ನು ಅವನಿಗೆ ದಯಪಾಲಿಸಿ ದುಷ್ಟ ಧನುಜನ ಸೆರೆಯಲ್ಲಿದ್ದ ಹದಿನಾರು ಸಾವಿರ ಗೋಪಿಕಾ ಸ್ತ್ರೀರನ್ನು ಮುಕ್ತಗೊಳಿಸಿದ ಮನುಮಥನ ಪಿತನೆಂದು ಮಾನಿನಿಯರೆಲ್ಲಯ ಅನುರಾಗದಿಂದಿರಲು ಅಜನ ಪಿತ ಅವರಿಗೆ ಅನುನಯದಿ ಮನ್ನಿಸಿ ಅಂದಣಗಳೆಲ್ಲೇರಿಸಿ ದ್ವಾರಕಿಗೆ ವಿಜಯಂ ಗೈಯಿಸಿದನು.

ಭಕ್ತರ ಪ್ರೀಯನಾದ ಭಾವಜನಯ್ಯನು ದೇವೇಂದ್ರಪುರಕ್ಕೆ ಬಂದು ವೃಂದಾರತರಿಂದ ಪೂಜೆಗೊಂಡ, ತನ್ನ ತಾಯಿಯಾದ ಅದಿತಿಯ ಮಂದಿರಕ್ಕೆ ಸತಿ ಸಹಿತ ತೆರಳಿದನು. ಜಗದುದ್ಧಾರನಾದ ಜಾಹ್ನವೀಜನಕನು ಮಗನಾದನೆಂಬ ಮಮತೆಯಿಂದ ಅದಿತಿಯು ಪೊಡಮಟ್ಟ ಸುರವಂದ್ಯನನ್ನು ಮೈದಡವಿ ಮುದ್ದಾಡಿದಳು. ಆನಂದಯೋಗದಲ್ಲಿ ಮೈಮರೆದಳು.

ಅಲ್ಲಿಯೇ ಇದ್ದ ಸೊಸೆಯಾದ ಸತ್ಯಭಾಮೆಯನ್ನು ಹತ್ತಿರ ಕರೆದು, ಪರಮ ಭಕ್ತಿಭಾವದಿಂದ ವಂದಿಸಿದ ಸತಿಯನ್ನು ಹಲವು ಬಗೆಯಿಂದ ಹರಸಿದಳು. ಭಾಮೆಯತ್ತ ಕುಂಡಲಗಳನ್ನು ಸ್ವೀಕರಿಸಿ ಸೊಸೆಗೆ ದಿವ್ಯಾಭರಣ ವಸ್ತ್ರಗಳನ್ನು ಕೊಟ್ಟು ಚರಣದಂದುಗೆಯನ್ನು ನಿತ್ತು ಆಶೀರ್ವದಿಸಿದಳು.

ಅಷ್ಟರಲ್ಲಿ ಇಂದ್ರನ ರಾಣಿ, ಶಚಿಯ ಬರಲು ಅವಳೆದುರಿಗೆ ಅದಿತಿಯ ಭಾಮೆಯ ಗುಣಗಳನ್ನು ಕೊಂಡಾಡಿದಳು. ಶಚಿಗೆ ಇದು ಸಹಿಸಲಿಲ್ಲ. ಕರಿಗಳೆಲ್ಲ ಐರಾವತಕೆ ಜೋಡೆ? ಕನಕ, ಕೊಂಬ್ಡಿತ್ತಾಳಿ ಬಣ್ಣ ಒಂದೆಯೇ ಈ ತರಳೆ ನಮಗೆ ಸರಿಯಾಗೋಳೆ? ಎಂದು ಮೊದಲಿಸಿದಳು. ಅದಿತೆ ಕೋಪಿಸಿ ಹಿರಿ ಸೊಸೆಗೆ ಬುದ್ಧಿ ಹೇಳಿದಳು. ಭಾಮೆಯನ್ನು ಸಂತೈಸಿದಳು.

ತಾಯಿಯಿಂದ ಬೀಳ್ಕೊಂಡು ಮುರರಿಪು ಗರುಡವಾಹನನಾಗಿ ಧರೆಯುತ್ತ ಹೊರಟ. ದಾರಿಯಲಿ ಅಮರರ ಸಿರಿಯ ನಂದನವನ ಹತ್ತಿತ್ತು. ಭಾಮೆವನದ ಸೊಬಗಿಗೆ ಮೆಚ್ಚಿದಳು. ಪರಮಾತ್ಮನು ಸತಿಗೆ ವನವನ್ನು ತೋರಿಸಲು ಎರಡು ಘಳಿಗೆ ಇಳಿದ. ವನದ ಸೌಂದರ್ಯ ನೋಡುತ್ತಾ ನೋಡುತ್ತಾ ಒಂದು ದಿವ್ಯವೃಕ್ಷದ ಬಳಿ ಬಂದನು.

'ಸೋಜಿಗವಾಗಿದೆ ಸೊಗಸಿನ ವೃಕ್ಷವು' ಎಂದು ಭಾಮೆಯ ಉದ್ಗಾರ ತೆಗೆದಳು. ಕೃಷ್ಣನು ಇದು ನಿನ್ನ ಕೋಪ ಕೆರಳಿಸಿದ ಪಾರಿಜಾತ ಎಂದನು.

ಸತ್ಯಭಾಮೆ ಇದನ್ನು ಒಯ್ದು ನಮ್ಮಂಗಳದಲಿ ನೆಡುವಾ ಮಾತು ಕೊಟ್ಟಿರುವೆ ಪೂರೈಸು! ಎಂದಳು.

ಈ ಸುದ್ದಿ ಸುರರಿಗೆ ತಿಳಿದು, ಮದಗಜವೇರಿ ಬರಲು ಹೊತ್ತುವುದು ಕದನ! ಎಂದ ಶ್ರೀಕೃಷ್ಣ ಆವರೊಡನೆ ಭೀತಿಯನು ತೋರಿಸುವೆ? ನಿನ್ನ ಮಹಿಮೆ ಯಾರು ಬಲ್ಲರು? ಭೂರಿನಯನುಳ್ಳವನ ನಾರಿ ನಿನ್ನೆದುರು ನನ್ನ ನಿಂದಿಸಲಿಲ್ಲೆ? ಎಂದು ನಯನವಾರಿಯಿಂದ ಅರುಹಿದಳು, ಸತ್ಯಭಾಮೆ.

ಗರುಡನಿಗೆ ಸನ್ನೆ ಮಾಡಲು ಕ್ಷಣದಲ್ಲಿ ಆ ಮಹಾವೃಕ್ಷವನು ಕಿತ್ತು ಗರುಡ ಹೆಗಲಲ್ಲಿರಿಸಿಕೊಂಡು, ಈ ಸುದ್ದಿ ಸುರೇಂದ್ರನನ್ನು ತಲುಪಿತು. ದೇವೇಂದ್ರನು ಸಕಲ ಬಲ ಸಹಿತ ಐರಾವತವನ್ನೇರಿ ಧಾವಿಸಿದ. ಈ ಕೃತ್ಯ ನಿನ್ನದು ನೀನೇ ನಿರ್ವಹಿಸು ಎಂದ ಶ್ರೀಕೃಷ್ಣ ಭಾಮೆಗೆ. ಸತ್ಯಭಾಮೆ ಧನುರ್ಬಾಣಗಳನ್ನು ಧರಿಸಿ, ಧರೆಯ ಸತ್ವವನ್ನುರುಹಲು ಸಿದ್ಧಳಾದಳು. ರಣಚಂಡಿಯ ಆ ರಭಸಕ್ಕೆ ಯಾರು ಉಳಿಯದಾದರು. ಸುರಪಶರಗಳ ಸುರಿಮಳೆ ಸುರಿಸಿ, ಸೋತು, ದೇವೇಂದ್ರ ಶರಣು ಹೊಕ್ಕನು.

ಕರುಣಾನಿದಿಯು ಅವನನ್ನು ಮನ್ನಿಸಿ ಪತ್ನಿಯ ಬಯಕೆ ತೀರಿಸಿ ಮರಳಿ ವೃಕ್ಷವನ್ನು ಕಳಿಸುತ್ತೇನೆ ಎಂದು ಹೇಳಿ ದ್ವಾರಕೆಗೆ ಸಾಗಿದನು. ವಾರಿಜನಾಭನು ದಿವ್ಯ ಪಾರಿಜಾತವನು ತಂದು, ನಾರಿ ರನ್ನೆಯ ಮನೆಯ ಅಂಗಳದಲ್ಲಿರಿಸಲು ಪುರದ ನಾರಿಯರೆಲ್ಲರು ಬಂದು ನೆರೆದರು. ಏನು ಪುಣ್ಯವ ಮಾಡಿದಳೋ! ಏನು ಸೋಂಪಿಯ ನೋಂತಿದ್ದಳೋ! ಈ ನಾರಿಗೆ ಈಡಿಲ್ಲ ಎಂದು ಹೊಗಳಿದರು.

ಪಾರಿಜಾತ ಭಾಮೆಯ ಅಂಗಳದಲ್ಲಿ ನಿಂತಿತು. ಗಾಳಿಗೆ ಅದರ ಹೂಗಳೆಲ್ಲ ಹಾರಿ ರುಕ್ಮಿಣಿಯ ಮನೆಯ ಸೇರಿದವು. ಭಾಮೆ ಶ್ರೀಕೃಷ್ಣನಿಗೆ ಇದೇನು? ಎಂದಳು. ಶ್ರೀಕೃಷ್ಣನು ಅವಳ ಹೃದಯದ ಹದವನ್ನರಿತು. ನೀರಜಗಂಧಿ ನಾನೆಂಬುವ ಅಹಂಕಾರ ಬಿಟ್ಟು ಅಕ್ಕ ರುಕ್ಮಿಣಿಯ ಮನೆಗೆ ಹೋಗು, ಅವಳು ತಂಗಿಯನ್ನು ಮನ್ನಿಸಿ ಅಲರುಗಳ ನಿತ್ತು ಕಳುಹುವಳು ಎಂದನು.

ಎನ್ನ ಮಾನಾಪನಾನಗಳು ನಿನ್ನದಲ್ಲವೆ ರಮಣ! ಎಂದು ಸಿಂಗಾರಾಗಿ ರುಕ್ಮಿಣಿಯ ಮನೆಗೆ ಹೊರಟಳು. ಬಾಗಿಲಲ್ಲಿಯೇ ರುಕ್ಮಿಣಿಯ ತಂಗಿಯನ್ನು (ಸತ್ಯಭಾಮೆ) ತಬ್ಬಿ ಸ್ವಾಗತಿಸಿ ಒಳಗೆ ಕರೆದೊಯ್ದಳು.

ಭಾಮೆ – ರುಕ್ಮಿಣಿಯ ಕೂಡುವ ಪ್ರೇಮ ನೋಡಲು ಸ್ವಾಮಿಯ ಬಂದ, ಮೇಘ ಶ್ಯಾಮ ಬಂದ, ಇಬ್ಬರಿಗೂ ತತ್ವದ ಮಾತನ್ನು ಹೇಳಿದ, ರುಕ್ಮಿಣಿಯ ಮಂದಿರದಲ್ಲಿ ಶ್ರೀಕೃಷ್ಣನಿಗೆ ರಮಣಿಯರಿಬ್ಬರಿಗೆ ಆರೋಗಣೆಯಾಯಿತು.

ಶುಭ ಮುಹೂರ್ತದಲ್ಲಿ ಹದಿನಾರು ಸಾವಿರ ಹರಿಣಾಕ್ಷಿಯರೊಂದಿಗೆ ಹರಿಯ ಮದುವೆ ಸಂಭ್ರಮದಿಂದ ಸಂಪನ್ನವಾಯಿತು. ಶೋಭಾನದ ಹಾಡು, ದ್ವಾರಕೆಯಲ್ಲಿ ಮೊಳಗಿ ಮಂಗಳ ಗೀತೆಗಳ ನಾದ ನುಡಿಯ ಹತ್ತಿದವು.

ಧರೆಯೊಳು ರಾಯಚೂರ ಸೀಮೆಯೊಳು ವರದಪರಾಳ ತಮ್ಮಣ್ಣನು ರಚಿಸಿದ 'ಪಾರಿಜಾತವು' ಸಾರ ಭಾಗವತ ಕ್ರಮದಿಂದ ಪೂರ್ಣವಾಯಿತು.

ಹೇಳುವ ಕೇಳುವ ಸ್ವಾರಸ್ಯದವರಿಗೆ ಸಂಪದವು ಶೋಭನವು.

---

ಅಪರಾಳ ತಮ್ಮಣ್ಣ ವಿರಚಿತ : ಶ್ರೀಕೃಷ್ಣ ಪಾರಿಜಾತ ಪ್ರಸ್ತಾವನೆ ಭಾಗದಿಂದ ಆಯ್ದುಕೊಳ್ಳಲಾಗಿದೆ.

## ಅಧ್ಯಾಯ – ೪
# ಕೊರವಂಜಿ ಪಾತ್ರ ಹಾಗೂ ವಿಶೇಷತೆ

ಸಂಸ್ಕೃತದ ಬಯಲಾಟಗಳು ದೇಶದ ತುಂಬ ಪ್ರಸಾರಗೊಳ್ಳುವಲ್ಲಿ ಊರಿದೊಂದಿಗೆ ಬಯಲಾಟಗಳನ್ನು ಸಂಚಾರಿಯಾಗಿ ನಿರ್ವಹಿಸಿದ ಪಾತ್ರ ಬಹುದೊಡ್ಡದಾಗಿದೆ. ಈ ಬಯಲಾಟಗಳಿಂದಾಗಿ ಜನಸಾಮಾನ್ಯರು ಹಾಗೂ ಸುಸಂಸ್ಕೃತರು ಸೇರಿಕೊಂಡು ಸಂಸ್ಕೃತದಲ್ಲಿದ್ದ ಕಾವ್ಯಭಾಷೆಯನ್ನು ಸರಳಿಕರಿಸಿ ವಿವರಿಸುತ್ತ ಸಂಚಿರಿಸಿದರು. ಇಂಥ ಚಾರಣರಿಂದಲೇ ಸಂಸ್ಕೃತ ನಾಟಕಗಳು ತೆಲುಗಿನ ಯಕ್ಷಗಾನಕ್ಕೆ ಪ್ರೇರಣೆ ನೀಡಿದವು. ಅದೇ ರೀತಿಯಾಗಿ ಪಾರಿಜಾತಪಗಹರಣಕ್ಕೆ ಸಂಬಂಧಿಸಿದ ಯಕ್ಷಗಾನಗಳು ಹೀಗೆಯೇ ಉದ್ಭವಗೊಂಡಿರಬಹುದು. ಅನುವಾದದ ಮೂಲಕವೂ ಸಂಸ್ಕೃತ ನಾಟಕಗಳು ಅನೇಕ ಪ್ರಾಂತಿಯ ಭಾಷೆಗಳಿಗೆ ಪ್ರವೇಶಿಸಿರುವುದಕ್ಕೆ ಉಲ್ಲೇಖವುಂಟು[೧]. ದಟ್ಟವಾಗಿ ನಡೆದ ಅನುವಾದ ಸಂದರ್ಭದಲ್ಲಿ ಪಾರಿಜಾತಕ್ಕೆ ಸಂಬಂಧಿಸಿದ ಸಂಸ್ಕೃತ ನಾಟಕಗಳು ತೆಲಗು ಭಾಷೆಯನ್ನು ಪ್ರವೇಶಿಸಿದ ಸಾಧ್ಯತೆಯನ್ನು ಅಲ್ಲಗಳೆಯಲಾಗುವುದಿಲ್ಲ. ತೆಲಗು ಪಾರಿಜಾತ ಯಕ್ಷಗಾನ, ಕೂಚಿಪುಡಿ ಬಹಳಷ್ಟು ಕೃತಿಗಳಿಗೆ ಸ್ಫೂರ್ತಿ ನೀಡಿದೆ.

ತೆಲಗಿನ ಭಾಮಾಕಲಾಪದಲ್ಲಿ ಸತ್ಯ–ರುಕ್ಮಿಣಿಯರ ಸವತಿ ಜಗಳ ಮುಖ್ಯವಾಗಿದೆ. ಇದರಲ್ಲಿ ಮಾಧವಿಎಂಬ ಸಖಿ ಪಾತ್ರವೊಂದು ಸಿದ್ಧೇಂದ್ರಯೋಗಿಗಳ ಅಪೂರ್ವ ಸೃಷ್ಟಿ. ಅರ್ವಾಚೀನ ಯಕ್ಷಗಾನ ಕೃತಿಗಳ ಮೇಲೆ ಭಾಮಾ ಕಲಾಪದ ಪ್ರಭಾವ ಹೆಚ್ಚಾಯಿತು. ಈ ಮಾರ್ಗದಲ್ಲಿ ಪಾರಿಜಾತ ಕೃತಿಯಂಥ ವೃತ್ತಾಂತಗಳು ಯಕ್ಷಗಾನದಲ್ಲಿ ಮೂಡಿಬಂದವುಗಳು. ಇವುಗಳಲ್ಲಿ ಮಾಧವಿ ಪಾತ್ರವಿದೆ, ಸವತಿ ಮತ್ಸರ ಮುಖ್ಯವಾಗಿದೆ. ಅಲ್ಲದೇ ನೃತ್ಯ ಪ್ರಧಾನವಾಗಿದೆ. ನೃತ್ಯಕಳಾನುಕೂಲವಾಗಿ ರಮ್ಯತೆಯನ್ನು ಹಾಗೂ ಪ್ರದರ್ಶನಕ್ಕೆ ತಕ್ಕಂತೆ ಪಾತ್ರಗಳಿವೆ. ಅದೇ ರೀತಿಯಾಗಿ ತೆಲಗು ಪಾರಿಜಾತ ಯಕ್ಷಗಾನ ಅನೇಕ ಕೃತಿಗಳು ನಾವಿತಿಮ್ಮಣ್ಣ ಪ್ರಭಾವ ಪಡೆದಿರುವುದು, ಸಿದ್ಧೇಂದ್ರ ಯೋಗಿಯಿಂದ ಆರಂಭಗೊಂಡ ಅಭಿನಯದ ಬ್ರಾಹ್ಮಣ ವಂಶಗಳು ಇಂದಿಗೂ ತೆಲಗು ನಾಡಿನಲ್ಲಿ ಜೀವಂತವಾಗಿರುವುದು. ಈ ಎರಡು ಅಂಶಗಳಿಂದ ನಿರ್ಮಾಣಗೊಂಡ ತೆಲಗು ಪಾರಿಜಾತ ಪರಂಪರೆಯನ್ನು ಸಹಜವಾಗಿ ಊಹಿಸಬಹುದು. ಇಂದು ಕನ್ನಡ ಶ್ರೀಕೃಷ್ಣ ಪಾರಿಜಾತದಲ್ಲಿ ಕೊನೆಯಲ್ಲಿ ಬರುವ ಕೊರವಂಜಿ ಪಾತ್ರ ಕೂಡಾ ತೆಲುಗಿನ ಸಂಪ್ರದಾಯದಿಂದಲೇ ಬಂದಿದೆ. ಇದು ಪಾರಿಜಾತಕ್ಕೆ ತೆಲುಗಿನ ಸಂಪ್ರದಾಯವನ್ನು ಒದಗಿಸಿದ ತಾಜಾ ಉದಾಹರಣೆಯಾಗಿದೆ.

೧. ಶ್ರೀಕೃಷ್ಣ ಪಾರಿಜಾತ : ಒಂದು ಅಧ್ಯಯನ : ಡಾ॥ ಶ್ರೀರಾಮ ಇಟ್ಟಣ್ಣನವರು : ಪುಟಸಂಖ್ಯೆ – ೧೩.

ಶ್ರೀಕೃಷ್ಣ ಪಾರಿಜಾತವು ತೆಲುಗಿನ ಯಕ್ಷಗಾನದ ನಡೆಯಾದರೆ ಇದರ ಒಂದು ಅಂಗವೆಂಬಂತೆ "ಕೊರವಂಜಿ" ಬುಡಕಟ್ಟು ಸಂಪ್ರದಾಯವೂ ಇಲ್ಲಿದೆ. ಪಾರಿಜಾತಕ್ಕೆ ಹಿನ್ನಲೆಯನ್ನು ತೆಲುಗಿನ ಯಕ್ಷಗಾನ ಹೇಗೆ ಒದಗಿಸಿತು ಎಂಬುದನ್ನು ಸಮೀಕ್ಷಿಸುವಲ್ಲಿ ತೆಲುಗಿನಲ್ಲಿಯೇ ಬಳಕೆಯಲ್ಲಿರುವ ಕೊರವಂಜಿಯ ಪರಂಪರೆಯ ಅರಿವು ಅವಶ್ಯಕವೆನಿಸುತ್ತದೆ. ಕೊರವ, ಕುರವ, ಕೊರವಿ ಎಂಬುವುದು. ಆಂದ್ರಪ್ರದೇಶದ ಒಂದು ಆದಿವಾಸಿ ಅಥವಾ ಬುಡಕಟ್ಟು ಜನಾಂಗದ ಹೆಸರು. ಅಂಜಿ ಎಂದರೆ ಪಾದ ಅಥವಾ ಹೆಜ್ಜೆ. ಕೊರವಂಜಿ ಎಂದರೆ ಕೊರವ ಜಾತಿಯವರ ಪಾದವಿನ್ಯಾಸ, ನೃತ್ಯ ಎಂದು ಅರ್ಥ. ಇವರು ಊರಲ್ಲಿ ನಡೆಯುವ ಜಾತ್ರೆ, ಉತ್ಸವಗಳಲ್ಲಿ ಭಾಗವಹಿಸಿ ನೃತ್ಯದ ಮೂಲಕ ಜನರಿಗೆ ಮನರಂಜನೆ ನೀಡಿ ಹಣ ಪಡೆಯುತ್ತಿದ್ದುದಾಗಿ ತಿಳಿದು ಬರುತ್ತದೆ. ಇವರು ಕಣಿ ಹೇಳುವ ಕಾಯಕವನ್ನು ಪರಂಪರಾಗತವಾಗಿ ನಡೆಸಿಕೊಂಡು ಬಂದಿದ್ದಾರೆ[೧]. ತಿರುಪತಿ ಒಡೆಯನಾದ ಶ್ರೀನಿವಾಸನು ಕೊರವಂಜಿ ವೇಷದಿಂದ ಪದ್ಮಾವತಿಯಲ್ಲಿಗೆ ಹೋಗಿ ಕಣಿ ಹೇಳಿ ಬರುತ್ತಾನೆ. ಬಹುಶಃ ಈ ಕಥಾಂಶವು ಭಕ್ತ ಕವಿಗಳಿಗೆ ಆಕರ್ಷಿಸಿದಂತೆ ತಾವು ರಚಿಸುವ ಗೀತೆಗಳಲ್ಲಿ ಕೊರವಂಜಿಯ ಸನ್ನಿವೇಶ ಬಹಳ ಮಹತ್ವದಾಗಿ ಕಾಣಿಸಿಕೊಂಡು ಬ್ರಹ್ಮಜ್ಞಾನವನ್ನು ಈ ಪಾತ್ರದ ಮೂಲಕ ನೀಡಲು ಪ್ರಾರಂಭಿಸಿದರೆಂದು ಕಾಣುತ್ತದೆ. ಹೀಗೆ ಕೊರವಂಜಿಯಾಗವ ಹಲವಾರು ಕಥೆಗಳನ್ನು ಬರೆದರು. ಹೀಗೆ ೧೨ನೇ ಶತಮಾನದ ಹೊತ್ತಿಗೆ ತೆಲುಗು ಸಾಹಿತ್ಯದಲ್ಲಿ ಕೊರವಂಜಿ ಕೃತಿಗೆ ನಿರ್ಮಾಣವಾಯಿತೆಂದು ತೋರುತ್ತದೆ. ತಮ್ಮ ಇಷ್ಟ ದೇವರನ್ನು ಕೊರವಂಜಿ ವೇಷದಲ್ಲಿ ನೋಡಿ ನಲಿಯುವ ಮೋಜಿನ ಹವ್ಯಾಸ ಬೆಳೆಯಿತು. ಆನಂತರ ಕೊರವಂಜಿ ಪಾತ್ರ ಕಾವ್ಯದಲ್ಲಿ ಒಂದು ತಂತ್ರವಾಗಿ ಬಳಸಲ್ಪಡತೊಡಗಿತು. ಈ ಹುಚ್ಚು ರಾಮಾನುಜಾಚಾರ್ಯರನ್ನು ಕೊರವಂಜಿಯನ್ನಾಗಿ ಮಾಡುವರೆಗೂ ಹೋಯಿತು[೨].

"ಕೊರವಂಜಿ'ಯ ಸನ್ನಿವೇಶವು ದೇವಿ ಪುರಾಣದಲ್ಲಿಯ ಒಂದು ಭಕ್ತ ಕಥೆಯಲ್ಲಿಯು ಬರುತ್ತದೆ. ಅದೇನೆಂದರೆ ಅದಿಚವಡಯ್ಯಾ ಎಂಬ ಶಿಭಕ್ತನಿದ್ದ. ಅವನು ೬೬ ಲಿಂಗಿನ ಪೂಜೆಯನ್ನು ಮಾಡುತ್ತಿದ್ದ. ಹೇಗೆಂದರೆ ಅವನ ಮನೆಯಲ್ಲಿರುವ ಜನ, ದನಗಳಿಗೂ ಲಿಂಗ ಎನ್ನುವಂತೆ, ಎತ್ತಿಗಿಲಿಂಗಾ, ತೊತ್ತಿಗೆ ಲಿಂಗ ಬಳಸೋ ಬಾವಿಗೆ ಲಿಂಗ, ಹೀಗೆ ಅವನು ಮನೆ, ಹೊಲ, ಗದ್ಯ ಎಲ್ಲವು ಲಿಂಗಮಯ ಶಿವಭಕ್ತನೆನಿಸಿದನು. ಆಗ ಶಕ್ತಿಯು ಬಂದು ಶಿವನನ್ನು ಪೂಜಿಸುವ ನೀನು ಶಕ್ತಿಯನ್ನು ಏಕೆ ಆರಾಧನೆ ಮಾಡುವುದಿಲ್ಲ ಎಂದು ಪರಿಪರಿಯಾಗಿ ಕಾಡುತ್ತಾಳೆ. ಎಷ್ಟು ಕಾಡಿದರೂ ಅವನು ಸೋಲೊಪ್ಪುವುದಿಲ್ಲಾ. ಏಕೆಂದರೆ ಶಿವಭಕ್ತನಾದ ನಾನು ನನ್ನ ದೇವರನ್ನು ಆರಾಧಿಸುವ ಜೋಗಿ ಬರಲಿ ಜಂಗಮನೆ ಬರಲಿ, ಅವರ ಸೇವೆ ಮಾಡುತ್ತೇನೆ. ಶಕ್ತಿ ಆರಾಧಕರಾದ ಭೂತೆ, ಗೋಂದಳಿಗರು ಯಾರಾದರೂ ಬಂದರೆ ನಾನು ಅವರನ್ನು ದಾನ ನೀಡುವುದಿಲ್ಲ ಎಂದು ಶಪತಮಾಡಿದಾಗ, ಶಕ್ತಿಗೆ ದಿಕ್ಕೆ ತೋಚದಂತಾಗಿ ಇವನನ್ನು ಪರಿಪರಿಯಾಗಿ ಕಾಡಿ ಇವನ ಎಲ್ಲ ಸಂಪತ್ತು ನಾಶವಾಗಿ, ಕೊನೆಗೆ ರೋಗಗ್ರಸ್ಥನಾಗಿ ಮನೆಯಲ್ಲಿ ಬಿದ್ದಿರಲು, ಇಂದೋ ನಾಳೆ ಸಾವು ಬದುಕಿನಲ್ಲಿ ಬದಕುತ್ತಿರಲು ಇವನ ಪತ್ನಿಯಾದ ಸುಗಂಗಮ್ಮ ತನ್ನ ಪತಿಗೆ ಬಂದ ರೋಗ ಗುಣವಾಗಲೆಂದು ಅನೇಕ ದೇವರ ಹೆಸರುಗಳಿಂದ ಮುಡಿಕಟ್ಟಿಟ್ಟು ಹಣದ ಸಂಪತ್ತೆ ರಾಶಿ ರಾಶಿಯಾಗಿ ಮನೆಯಲ್ಲಿತ್ತು. ಈ ಸಂದರ್ಭದಲ್ಲಿ ಶಕ್ತಿಗೆ ಒಂದು

೧. ಶ್ರೀಕೃಷ್ಣ ಪಾರಿಜಾತ : ಒಂದು ಅಧ್ಯಯನ : ಡಾ॥ ಶ್ರೀರಾಮ ಇಟ್ಟಣ್ಣನವರು : ಪುಟಸಂಖ್ಯೆ – ೧೮, ೧೯.
೨. ಅದೇ.

ವಿಚಾರ ಹೊಳೆಯಿತು. ನಾನು ಈಗ ಶಕ್ತಿರೂಪವನ್ನು ತ್ಯಜಿಸಿ "ಕೊರವಂಜಿ" ರೂಪ ಧಾರಣ ಮಾಡಬೇಕು ಎಂದು ಶಕ್ತಿಯು ಕೊರವಂಜಿಯಾಗಿ ಆ ಗ್ರಾಮದಲ್ಲಿ ತಲೆಯ ಮೇಲೆ ಶಕುನದ ಬುಟ್ಟಿಯನ್ನು ಹೊತ್ತು "ಶಕುನ ಕೇಳರವ್ವಾ ಶಕುನಾ" ನಿಮ್ಮ ಮನೆಯ ಸಂತಾನ, ಸಮೃದ್ಧಿ ಬೆಳೆಯಲಿ ಎಂದು ಹೇಳುತ್ತ ಕೇರಿ ಕೇರಿ, ಓಣಿ, ಓಣಿ ತಿರುಗುತ್ತಾ, ಬರುವ ಮಾರ್ಗದಲ್ಲಿ ಅನೇಕ ರೋಗಗ್ರಸ್ಥಜನ ಎದುರಿಗೆ ಬರಲು ಶಕ್ತಿ (ಕೊರವಂಜಿ) ಬಲ ಹಸ್ತ ಇಡಲು ರೋಗಗಳು ತನ್ನಷ್ಟಕ್ಕೆ ತಾನೆ ಮಾಯವಾಗುತ್ತ ಹೋದವು. ಇದನ್ನು ತಿಳಿದ ಸುಗಂಗಮ್ಮ ಆ ಕೊರವಂಜಿಯನ್ನು ಕರೆಯಲು ಹೇಳಿ ಆಗ ಕೊರವಂಜಿ ಬಂದು 'ನನ್ನ ವಡೆಯನಿಗೆ ಗುಣವಿಲ್ಲ. ಅದಕ್ಕೆ ಏನು ಮಾಡುವುದು ಎಂದಾಗ' ನಾನು ಹಾದಿ ಬೀದಿಯಲ್ಲಿ ಶಕುನ ಹೇಳುವ ಕೊರವಂಜಿ ನಾನಲ್ಲ. ಮೊದಲು ನಿನ್ನ ಮನೆಯನ್ನು ಹಾಗೂ ದೇವತೆ ಇರುವ ಮನೆಯನ್ನು ಗಂಧದಿಂದ ಸಾರಿಸಿ, ಶ್ರೀದೇವಿಯ ಪೂಜೆಮಾಡಿ, ರಂಗವನ್ನು ಬರೆ' ಆ ರಂಗದಲ್ಲಿ ಕುಳಿತು ಶಕುನವನ್ನು ಹೇಳುತ್ತೇನೆ ಎಂದಾಗ ಕೊರವಂಜಿ ಹೇಳಿದಂತೆ ತನ್ನ ಮನೆ ಸ್ವಚ್ಛಮಾಡಿ, ದೇವತಾ ಜಗಲಿ ಗಂಧದಿಂದ ಓರಣವಾಗಿ ಸಾರಿಸಿ, ಪಂಚಾರತಿ ಮತ್ತು ರಂಗವನ್ನು ಬರೆದು ಬಾ ಅಮ್ಮ ಕೊರವಂಜಿ ಎಂದಾಗ ಶಕ್ತಿ ಆ ರಂಗದ ಪೂಜೆಯನ್ನು ನೋಡಿ ಬಹಳ ಆನಂದವಾಗಿ ಈ ರಂಗದಲ್ಲಿ ನಾನು ಈ ಕೊರವಂಜಿಯ ರೂಪವನ್ನು ಧರಿಸಿ ಶಕುನ ಹೇಳಬಾರದೆಂದು ತನ್ನ ನಿಜ ರೂಪವನ್ನು ತೋರಿ ನಿನ್ನ ಗಂಡನಿಗೆ ಈಗಿಂದಿಗಲೆ ಗುಣಮಾಡುತ್ತೇನೆ. ನನ್ನ ಚರಣಕ್ಕೆ ತಂದು ಹಾಕು ಎಂದು ಹೇಳಿದಾಗ ಸುಗಂಗಮ್ಮ ತನ್ನ ಗಂಡನನ್ನು ಶಕ್ತಿ ಚರಣಕ್ಕೆ ಹಾಕಿದಾಗ, ಶಕ್ತಿ ಆತನನ್ನು ಗುಣಮುಖ ಮಾಡುತ್ತಾಳೆ ಹೀಗೆ ಈ ಕಥೆ ಮುಂದೆ ಸಾಗುತ್ತದೆ. ಹೀಗೆ ಉತ್ತರ ಕರ್ನಾಟಕದ ಗೋಂದಲಿಗರ ಕಥೆಯಲ್ಲಿ ಬರುವ 'ಕೊರವಂಜಿ' ಪಾತ್ರವು. ಶಕ್ತಿ ತಾನು ಅನ್ಯಭಕ್ತರನ್ನು ವಲಿಸಿಕೊಳ್ಳುವ ಬಗೆಯನ್ನು ಈ ಕೊರವಂಜಿ ರೂಪಧಾರಣ ಮಾಡಿ ತನ್ನವರನ್ನು ಕಾಡಿ ಬೇಡಿ, ಉದ್ದರಿಸಿದ ಸನ್ನಿವೇಶ ಶ್ರೀದೇವಿ ಭಾಗವತ ಕಥೆಯಲ್ಲಿ ಬರುವುದನ್ನು ಕಾಣಬಹುದು. ಅದರಂತೆ ಶ್ರೀಕೃಷ್ಣ ಭಾಗವತ ಕಥೆಯಲ್ಲಿ ಶ್ರೀಕೃಷ್ಣನು ತಾನೇ ಕೊರವಂಜಿ ರೂಪಧಾರಣ ಮಾಡಿ ಸತ್ಯಭಾಮೆಯನ್ನು ವಲಿಸಿಕೊಂಡು ಆಕೆಯಿಂದ ತನ್ನ ಕೌಸ್ತುಭ ಮಾಲೆಯನ್ನು ಪಡೆಯುವ ಸನ್ನಿವೇಶಗಳು ಒಂದೇ ರೀತಿಯಾಗಿ ಕಾಣುತ್ತವೆ. ಏಕೆಂದರೆ ಶ್ರೀಕೃಷ್ಣನು ಎಷ್ಟೋ ದೈತ್ಯರನ್ನು ಸಂಹರಿಸುವಂತೆ ಶಕ್ತಿ ಕೂಡಾ ಅನೇಕ ದೈತ್ಯರನ್ನು ಸಂಹರಿಸಿದ್ದಾಳೆ. ಈ ಎರಡು ಭಾಗವತ ಕಥೆಗಳಲ್ಲಿ ಬರುವ ಪರಮ ಶಕ್ತಿಗಳು ಜಗದ್ದುದ್ಧಾರಕ್ಕಾಗಿ ಜನಿಸಿದವು ಎಂದು ಮೆಲ್ನೋಟಕ್ಕೆ ತಿಳಿದು ಬರುತ್ತದೆ.

ಭಾಮಾಪಂಥ ತಾತ್ವಿಕ ವಿಷಯ, ಕೂಚಿಮುಡಿಯ ಅಭಿನಯದ ಶಾಸ್ತ್ರೀಯಡೆ ಹೇಗೆ ಇರಲಿ ಭಾಮೆಯ ಮಾನವೀಯ ಗುಣಗಳು ಮಾತ್ರ ಆಂಧ್ರದ ಕಾವ್ಯ, ಬಯಲಾಟಗಳ ಮುಖಾಂತರ ಬೆಳೆದು ಬಂದವುಗಳು. ಹೀಗೆ ಬೆಳೆದುಬಂದ ಪಾರಿಜಾತದ ಕೊರವಂಜಿ ಪರಂಪರೆ ಆಂಧ್ರದ ಸೀಮೆಯಲ್ಲಿ ಹುಟ್ಟಿ ಬೆಳೆದ ಕನ್ನಡಿಗರನ್ನು ಆಕರ್ಷಿಸಿದೆ. ಅಪರಾಳ ತಮ್ಮಣ್ಣನಾಗಲಿ, ಸಿರಗುಪ್ಪಿ ಸದಾಶಿವಪ್ಪನಾಗಲಿ ಇವರುಗಳ ಮೇಲೆ ಗಾಢವಾದ ಪ್ರೇರಣೆ, ಪ್ರಭಾವಬೀರಿ, ಕನ್ನಡದ ಶ್ರೀಕೃಷ್ಣ ಪಾರಿಜಾತದ ಉಗಮಕ್ಕೆ ನಾಂದಿಹಾಡಿದೆ.

---

ಆಧಾರ : ಆಳಂದ ತಾಲೂಕಿನ ಮಡ್ಯಾಳಗ್ರಾಮ ಗೋಂದಲಿಗರ ಕಥೆ ಹೇಳುವ : ಶ್ರೀ ಪಿತಾಂಬರ ಶಿವರಾಮ ಗೋಂದಳೆ

ತೆಲುಗಿನ ತರಿಗೊಂಡ ವೆಂಗಮಾಂಬ ಎಂಬವಳ ಕೃತಿ 'ಪಾರಿಜಾತ ಹರಣಮ' ತದ್ರೂಪವಾಗಿ ಕನ್ನಡದ ಕಾವ್ಯ 'ಅಪರಾಳ ಪಾರಿಜಾತ' ಕಾವ್ಯವನ್ನೆ ಹೋಲುತ್ತದೆ[೧]. ಈ ಭಾಗದಲ್ಲಿ ಶ್ರೀಕೃಷ್ಣನು ಸತ್ಯಭಾಮೆಯ ಆಸೆ ನೆರವೆರಿಸುವುದಕ್ಕಾಗಿ ಪಾರಿಜಾತ ಗಿಡವನ್ನೇ ತರುವ ಸನ್ನಿವೇಶ ಪ್ರಾರಂಭದಲ್ಲಿಯೇ ಕಾಣುತ್ತದೆ. ಅದೇ ರೀತಿಯಾಗಿ ಸತ್ಯಭಾಮಾನಲ್ಲಿಗೆ ಸರಸ್ವತಿ ಕೊರವಂಜಿಯಾಗಿ ಬರುವುದು, ಸತ್ಯಭಾಮಾ ತಪಸ್ಸು ಮಾಡಿ ಸ್ವಾಮಿಯನ್ನು ವಲಿಸಿಕೊಳ್ಳುವುದು, ನರಕಾಸುರನ ವಧೆ, ಇಂದ್ರ–ಕೃಷ್ಣರ ಯುದ್ಧ, ಆನಂತರ ಸವತಿಯ ಜಗಳ, ರುಕ್ಮೀಣಿಯ ಉನ್ನತ ವಿಚಾರ ಹೀಗೆ ಬರುತ್ತವೆ. ಈ ಪಾರಿಜಾತದಲ್ಲಿ ಸರಸ್ವತಿಯು ಕೊರವಂಜಿಯಾಗಿ ಬಂದರೆ, ಕನ್ನಡ ಪಾರಿಜಾತದಲ್ಲಿ ಕೃಷ್ಣ ಕೊರವಂಜಿಯಾಗಿ ಬರುತ್ತಾನೆ ಎಂಬುದನ್ನು ಬಿಟ್ಟರೆ ಉಳಿದೆಲ್ಲ ಸನ್ನಿವೇಶಗಳು ಒಂದೇ ರೀತಿಯಾಗಿ ನಡೆದುಕೊಂಡು ಬರುತ್ತವೆ.

ಶ್ರೀಕೃಷ್ಣ ಪಾರಿಜಾತದಲ್ಲಿ 'ಕೊರವಂಜಿ'ಯ ಪಾತ್ರ ಸೃಷ್ಟಿಗೆ ಮೂಲ ಕಾರಣವೆಂದರೆ ಸತ್ಯಭಾಮೆಯ ರುಕ್ಮೀಣಿಯ ಅರಮನೆಗೆ ಬಂದ ಮೇಲೆ ರುಕ್ಮೀಣಿಯು ಅನಾಧರಣೆ ಮಾಡಿದ್ದು, ಹಾಗೂ ಶ್ರೀಕೃಷ್ಣ ಕಣ್ಣೆತ್ತಿಯು ಸತ್ಯಭಾಮೆಯಡೆಗೆ ನೋಡದಿರುವುದು. ಈ ಕಾರಣಕ್ಕೆ ಸತ್ಯಭಾಮೆಯು ಜಗದಂಬೆಯ ಪೂಜೆಯನ್ನು ಮಾಡಿ ಜಗದಂಬೆಗೆ ವಲಿಸಿಕೊಳ್ಳಲು ಅನನ್ಯ ಭಕ್ತಿಯಿಂದ ಭಜಿಸಿದಳು. ಜಗದಂಬೆ ಇವಳ ಭಕ್ತಿಗಾಗಿ ವಲಿದು, ಪ್ರತ್ಯಕ್ಷಳಾಗಿ 'ಏನು ವರವ ಬೇಕು ಸತ್ಯಭಾಮೆ' ಎಂದು ಕೇಳು ಅಂಜಬೇಡ. ಅಭಯ ಹಸ್ತದಿಂದ ಕೊಡುತ್ತೇನೆಂದಾಗ, ನಿನ್ನ ಇಚ್ಚೆಯಂತೆ ಶ್ರೀಕೃಷ್ಣ ನನ್ನಲ್ಲಿಗೆ ಬರುವಂತೆ, ನನ್ನಿಚ್ಚೆ ಪೂರೈಸುವಂತೆ ಅನುಗ್ರಸು ಎಂದು ಪ್ರಾರ್ಥಿಸುತ್ತಾಳೆ. ಆಗ ಜಗದಂಬೆ ತಥಾಸ್ತೋ ಎಂದು ಅಭಯ ಹಸ್ತದಿಂದ ವರವನ್ನು ನೀಡುತ್ಥಾಳೆ. ಆಗ ಸತ್ಯಭಾಮೆ ವಿಧವಿಧವಾಗಿ ಜಗದಂಬೆಯನ್ನು ಸ್ತುತಿಸಿ, ನಮಸ್ಕರಿಸಿ, ಅವಳನ್ನು ಬೋಳ್ಕೊಟ್ಟಳು. ಆನಂತರ ತಾನು ಶೃಂಗಾರ ಮಾಡಿಕೊಂಡು ದಾಸಿಯರೊಂದಿಗೆ ಮಂದಿರದಲ್ಲಿ ಶ್ರೀಕೃಷ್ಣನ ದಾರಿಯನ್ನು ನೋಡತೊಡಗಿದಳು.

ಶ್ರೀಕೃಷ್ಣನ ಮನಸ್ಸು ಕೂಡಾ ಆ ಜಗದಂಬೆಯ ವರದಿಂದ ಬದಲಾಯಿಸಿತು. ತಾನು ಸತ್ಯಭಾಮೆಯನ್ನು ನಿರ್ಲಕ್ಷಿಸಬಾರದ್ದಾಗಿತ್ತು, ನಾನು ಮಾಡಿದ್ದು ಸರಿ ಅಲ್ಲ. ಅದೇಲ್ಲ ಅನುಚಿತವಾಯಿತು. ಹೀಗೆ ಕೃಷ್ಣನಿಗೆ ಪರಿತಾಪವಾಗಲು ಪಾಶ್ಚಾತ್ತಾಪದಿಂದ ಶ್ರೀಕೃಷ್ಣನು ಸತ್ಯಭಾಮೆಗೆ ಕ್ಷಮೆ ಯಾಚಿಸಿಬೇಕು. ಅಲ್ಲದೇ ಅವಳ ಮನ ತಿಳಿದು ಬರಬೇಕೆಂದು ಶ್ರೀಕೃಷ್ಣನು 'ಕೊರವಂಜಿಯ ರೂಪ ಧರಿಸುತ್ತಾನೆ.

**ರಾಗ–ನಾಂಡಿ :** **ತಾಳ – ಝಂಪೆ**

ಜಯಜಯ ಜಗನಾಥ ಜಯ ಸುಪರ್ಣವರೂಥ
ಜಯ ಕೌಸ್ತುಭಾಭರಣ ಜಯ ದುರಿತ ಹರಣಾ
ಜಯ ಪೀತವಸನಾವರಣ ಜಯ ದೈತ್ಯಹರಣಾ
ಜಯ ಭವ್ರೋತ್ತರಣ ಜಯ ತೀರ್ಥಚರಣಾ ॥ ೧ ॥

೧. ಶ್ರೀಕೃಷ್ಣ ಪಾರಿಜಾತ : ಒಂದು ಅಧ್ಯಯನ : ಡಾ॥ ಶ್ರೀರಾಮ ಇಟ್ಟಣ್ಣನವರು : ಪುಟಸಂಖ್ಯೆ – ೧೯.

ವಾರಿಜಾಸನ ತನಯ ನಾರದಮುನೀಶ
ಸುರ – ಪಾರಿಜಾತ ತರುವಿನೊಂದು ಕುಸುಮ
ದ್ವಾರಕೀನಿಲಯ ಅಚ್ಯುತಗೆ ಕೊಡೆ ಸ್ನೇಹದಿಂ
ನಾರಿ ರುಕ್ಮಿಣಿಗಿತ್ತಾ ನೆವದಿಂದಲೇ ಜಯಾ ಜಯಾ ॥ ೨ ॥

ಶ್ರೀರಮಣನೊಡನೆ ಸತ್ರಾಜಿತ ಕ್ಷಿತಪ–ಸುಕು
ಮಾರಿಮುನಿದರೆ ಶೌರಿ ಕರುಣದಿಂದಾ
ವಾರಿಜಾಕ್ಷಿಯ ಮನೋವಿಚಾರ ಮಾಡುವೆನೆಂದು
ನಾರಾಯಣಿಯೆಂಬ ಕೊರವಿ ರೂಪಾದಾ ॥ ೩ ॥

ಈ ಪದ್ಯದೊಂದಿಗೆ ಕೃಷ್ಣನು ತನ್ನ ಮೊದಲನೆ ರೂಪವನ್ನು ತ್ಯಜಿಸಿ ಸತ್ಯಭಾಮೆಯನ್ನು ಒಲಿಸಿಕೊಳ್ಳಲು ಕೊರವಿಯ ರೂಪವು ಶ್ರೀಕೃಷ್ಣ ಪಾರಿಜಾತದ ಕೊನೆಯ ಪ್ರವೇಶದಲ್ಲಿ ಬರುತ್ತದೆ. ಇಲ್ಲಿಯು ಕೂಡಾ ಶ್ರೀಕೃಷ್ಣ ಸ್ತುತಿ ಇದ್ದುದನ್ನು ಗಮನಿಸಿಬೇಕು. ಅದರಂತೆಯ ಕೊರವಂಜಿಯ ಆಡುಭಾಷೆಯಲ್ಲಿ (ತೆಲುಗಿನಲ್ಲಿಯೆ) ಅಪರಾಳ ತಮ್ಮಣ್ಣ ತೆಲುಗಿನ ಪದ್ಯವನ್ನು ನೋಡಬಹುದು.

**ಪಾತ್ರ – ಕೊರವಿ**
**ರಾಗ – ಎರಕಲಕಾಂಬೋದಿ ತಾಳ : ಆದಿ**

ಗಟ್ಟಲೋವಿದಾ ವಾನಲು ಗುರಿಸೆ
ಚ್ಯುಟ್ಟಲೂ ಚಾಮಮಾ ಗಡ್ಡಿಲೂ ಚಿಗಿರೆ
ಹಟ್ಟಿ ಆವುಲಕು ಮ್ಯಾತ ಗಟ್ಟಿಗಾ ಗಲಗೆ
ತಟ್ಟಿ ಗಂಪಲಿಚ್ಚಿ ಕಡವಾಗಟ್ಟಿ ಚಲ್ಲದೆಸ್ತಿ ॥ ೧ ॥

ನಲ್ಲಿ ಕೂರಾ ಬುದ್ಧಿ ಕೂರಾ ನಲ್ಲೇರು ದೆಸ್ತೆ
ಪಲ್ಲಲು ದಿರಿಗಿ ಪೋತಿ ಮಾರ ಜೊನ್ನದೆಸ್ತಿ
ಬಲ್ಲಿಮೀತೊ ಮೊಗನಿತೂನ ಸನ್ನಗಿ ಸರ ಪಿಸ್ತಿ
ತಲ್ಲಿ ಮುಸಲಿ ಅತ್ತತೊ ರೊಟ್ಟೆಗಾಲ ಪಿಸ್ತಿ ॥ ೨ ॥

ಬಿಚ್ಚಮೆತ್ತ ಅತ್ತನೂರದಿಕ್ಕನಂ ಪಿಸ್ತಿ
ಮುಚ್ಚಟಾನಿ ಮೂಗನಿ ಬರ್ರೆದೆಚ್ಚ ಶಲವಿಸ್ತಿ
ಅಚ್ಚ ಅಗಸಿ ಮಾನೆ ರೊಟ್ಟೆ ಬಿಚ್ಚ ಬೆಲ್ಲಪಚ್ಚು
ಇಚ್ಚದೀರದೀಂಟಿ ಮೀದ ಚಲ್ಲ ಬುಚ್ಚುಕೊಂಟಿ ॥ ೩ ॥

ಆಕಲೂ ಪೋಕಲೂ ನಿಡುಗಂಟ ಕಟ್ಟುಕೊಂಟಿ
ಬೇಸ್ಯೆನಚೋಟ ಮೊವಂಚಮೇಸುಕೊಂಟಿ
ಏಕ ಚಿತ್ತಮು ನಾ ಮಂಚಿ ಪದಾಲು ಪಾಡುಕೊಂಟಿ
ಲೋಕಮೆಲ್ಲ ಚೂಡ ಸಂಪಿನೂನೆ ಬೂಸುಕೊಂಟಿ ॥ ೪ ॥

ಬುಕ್ಕಪಿಂಡಿ ದೆಚ್ಚಿನೇ ಮುಕ್ಕುಕಂಟಿಸ್ತಿ
ಲೆಕ್ಕಲೇನಿ ಮಲ್ಲೆಪೂಲು, ಮೊಗಲಿಪೂಲುದೆಸ್ತಿ
ಅಕ್ಕಲಕೂ ಅಮ್ಮಲಕೂ ಗುಡಿಸಿವಪ್ಪಗಿಸ್ತಿ
ಇಕ್ಕಡೂ ಕೇರಿಲೋನ ಯರಕ ಜಪವಸ್ತಿ ॥ ೫ ॥

**ಪದದ ಅರ್ಥ** : ಗಟ್ಟಿ = ಗುಡ ಪ್ರದೇಶ, ವಾನಲು = ಮಳೆ, ಗುರಿಸೆ = ಸುರಿ ಗಿಡ, ಗಂಟಿ, ಹುಲ್ಲೂ, ಚಿಗುರಿದವು ಹಟ್ಟಿಯ ದನಗಳಿಗೆ ಮೇವು ಸಿಕ್ಕು ಹಾಲು ಮೊಸರು, ಮಜ್ಜಿಗೆ ಸಮೃದ್ಧಿ, ಅದಕ್ಕಾಗಿ ನನಗೆ ಗಟ್ಟಿಯಾಠದ ಮೊಸರು ಮಜ್ಜಿಗೆ ನೀಡಿದ್ದಾರೆ.

ತೆಲಂಗಾಣ ಸೀಮೆಯಲ್ಲಿ ಬದುಕುವ ಕೊರವ ಜನಾಂಗದ ಕುಲಕಸಬಾದ (ಮಹಿಳೆಯರ) ಕಣಿ ಹೇಳುವುದು ಕಣಿ ಹೇಳಿ ಜನರಿಂದ ಕಾಳು ಕೂಳು ಮತ್ತು ಗಟ್ಟಿಯಾದ ಮೊಸರು ಮಜ್ಜಿಗೆ ನೀಡಿದ್ದನು ತಂದು ಕುಟುಂಬದ ಸರ್ವರೂ ಉಂಡು ಜೀವನ ಸಾಗಿಸುವುದೇ ಅವರ ಮೂಲಕಸಬು ಆಗಿದೆ. ಈ ಕುರಿತಾಗಿಯು ಪ್ರಕೃತಿಯು ಸಮೃದ್ಧಿ ಮಳೆ, ಬೆಳೆ ಆಗಿ ಧನಕರುಗಳು ಮೇವುತಿಂದು ಸಮೃದ್ಧಿ ಹೈನು ಸಿಗುತ್ತಿತ್ತು ಎಂದು ಈ ಪದ್ಯದಿಂದ ತಿಳಿದುಬರುತ್ತದೆ./ಕೊರವಂಜಿ ತನಗೊಪ್ಪುವ ಅಲಂಕಾರ ಶೃಂಗರಿಸಿಕೊಳ್ಳುವಳು. ಜಡೆಬಿಟ್ಟು ಸಂಪಿಗೆಣ್ಣೆಯನ್ನು ಹಚ್ಚಿ ಕುದಲು ಬೆನ್ನ ಮೇಲೆ ಹರಡಿದಳು. ಹಚ್ಚೆಯ ಬಟ್ಟು ಮುಖ, ಕೈ, ಕಾಲು, ಹಣೆಗಳ ಮೇಲೆ ಬರೆಸಿಕೊಂಡಳು. ಬೇರೆ ಬೇರೆ ಮಣಿಸರಗಳು ಕೊರಳಲ್ಲಿ ಧರಿಸಿಕೊಂಡಳು. ಹೀಗೆ ನಾ ನಾ ಬಗೆಯಾಗಿ ಸಿಂಗಾರ ಮಾಡಿಕೊಂಡ ಶ್ರೀಕೃಷ್ಣನು ನಾರಾಯಣಿ ಎಂಬ ಕೊರವಿಯ ರೂಪವನ್ನು ಬೇರೆ ಬೇರೆ ಶಕ್ತಿ ದೇವತೆಗಳಿಗೆ ತನ್ನ ಮನೋರಥ ತಿಳಿಸಿ ಕಾರ್ಯಸಿದ್ಧಿಯಾಗಲು ವರವ ನೀಡಿರೆಂದು ಈ ರೀತಿ ಪ್ರಾರ್ಥಿಸುತ್ತಾಳೆ.

**ರಾಗ – ನೀಲಾಂಬರಿ** **ತಾಳ – ಆದಿ**

ಭೈರವನಾಶ್ರೀತೆ ಎನ್ನಾ ವೈರಿಗಳಾ ಹಲ್ಲು ಮುರಿಯೆ
ಬಿರುದು ಹೊತ್ತೀನಿ ನಾ ನಿನ್ನ ಮರಿಯಾ ಬ್ಯಾಡೆನ್ನ
ಸೈರಿಸಾದವರ ನೀನು ಶಿಕ್ಷಿಸಬೇಕೇ ಸಾದೇವಿ
ಸರಿಯಿಲ್ಲದಾ ಶಾಕಾಂಬರೀ ಶಾಂಭವೀ ತಾಯಿ ॥ ೧ ॥

---

ಡಾ॥ ಶ್ರೀರಾಮ ಇಟ್ಟಣ್ಣವರ : ಶ್ರೀಕೃಷ್ಣ ಪಾರಿಜಾತ ಒಂದು ಅಧ್ಯಯನ ಗ್ರಂಥದಿಂದ ಈ ಪದ್ಯ ಪಡೆಯಲಾಗಿದೆ.

ಭಕ್ತಿ ಮಾಡಿದೇ ನಿನ್ನಲ್ಲಿ ಕಾತ್ಯಾಯಿನೀ ಮಹೋದರೀ
ಮುಕ್ತಕೇಶೀ ಮಹಂರಾಳೀ ಕೇಳೇ ಮಹಾಂಕಾಳೀ
ಸತಿಯಾರೊಳಗೆ ಶಿವ–ಸತಿ ನೀನೆನಿಸಿಕೊಂಡೆ
ಎತ್ತಿಕೊಳ್ಳೇ ಎನ್ನ ಮಾತನೂ ಏ ಶಿವ ದೂತೀ ॥ ೨ ॥

ಭಪ್ಪನ್ನಾ ದೇಶವನ್ನು ತಪ್ಪದಲೇ ತಿರುಗುವೆ
ಕಪ್ಪುಗೊರಳನರ್ಧಾಂಗಿನಿ, ಕೃಷ್ಣ ಪಿಂಗಳೇ
ಒಪ್ಪಿಕೊಳ್ಳೇ ಎನ್ನ ಮಾತಾ ಕಪ್ಪಾನಿಟ್ಟ ಜಗಕೆಲ್ಲ
ಉಪಕಾರಾ ಮಾಡಿ ತೋರುವೆಯೇ ತಪಸ್ವಿನೀ ॥ ೩ ॥

ವಿಕಟಾಂಗಿನೀ ಎನ್ನಾಗು ಪ್ರಕಟಿಸಿದ ಕಾರಣಾ
ಮುಕುಟವರ್ಧನರಿಗ್ಹೇಳಿದೆ, ಮೆಚ್ಚು ಪಡೆದೇ
ಆಕಟ, ನಿನ್ನವಳೆಂದು ಆದರದಿ ಕಾಯೆ ಬಂದು
ಭೃಕುಟಿ – ವಿಲಾಸೇ ಭದ್ರೇ ಗುಣ ಸಮುದ್ರೇ ॥ ೪ ॥

ಹಿಂದೆ ನಾರದ ಸ್ವಯಂವರದಂದು ರುಕ್ಮೀಣಿಗೆ ಕೊರವ್ಯಾಗಿ
ಬಂದು ಹೇಳಿದೊಂದೆ ಮಾತನೂ ಸತ್ಯಾಮಾಡಿದೆ
ಬಂಧನದೊಳ ದೇವಕಿಗೆ ಕಂದನುತ್ಕೃಷ್ಟವಾಪೇಳ
ಬಂದ ಬ್ರಹ್ಮ ಕೊರವಂಜಿಗೆ ಬೆನ್ನಿಲೀ ಇದ್ದೇ ॥ ೫ ॥

ಇಂದು ಎನಗೊಲಿಯ ಬಾರೇ ಇಂದ್ರಾಗಿ, ರುದ್ರಾಣಿದಯ
ದಿಂದಲಾವರ್ಣ ದಾಕ್ಷಾಯಿಣಿ ಕೇಳೇ ಬ್ರಹ್ಮಾಣೀ
ನಿಂದಲ್ಲೇ ನೀ ನೆಲೆಯಾಗಿ ಹೊಂದಿದಲ್ಲೆ ಕಲೆಯಾಗಿ
ಬಂದ ವಾಕ್ಯಗಳಲ್ಲಿ ಒಲಿಯೇ ವದನಾದಿ ನಲಿಯೇ ॥ ೬ ॥

ಹದಿನಾಲ್ಕು ಲೋಕದೊಳು ಪದರದಲೆ ಕಾಯ್ದೆನ್ನಾ
ಯದುಕುಲದಿ ದ್ವಾರಾವತಿಯೊಳಗೆ ಬಂದು ಕಾಯೆನ್ನ
ವದನ ಕಂಕಿತವಾಗಿ, ವಾಕು–ಸಿದ್ಧಿಯನೆ ಮಾಡಿ
ಮುದದಿಂದ ಲೇಸು ತೋರಿಸೇ ಮಹಿಮೆ ಉಳಿಸೆ ॥ ೭ ॥

ಹೀಗೆ ಎಲ್ಲ ಶಕ್ತಿದೇವತೆಗಳನ್ನು ಕೊಂಡಾಡುತ್ತಾ – ಪಾಡುತ್ತಾ ರಾಜಬೀದಿಯಲಿ ಕೊರವಿ ತನ್ನ ಜೀವನದನುಭವವನ್ನು ಹೇಳುತ್ತ ಕೇರಿಕೇರಿಗಳಲ್ಲಿ ತನ್ನ ಕಂದನನ್ನು ಎತ್ತಿಕೊಂಡು ಜೋಗುಳ ಪಾಡುತ್ತಾಳೆ.

ತೂಗಿರೆ ರಂಗನ ತೂಗಿರೆ ಕೃಷ್ಣನ
ತೂಗಿರೆ ಅಚ್ಯುತಾನಂದನ ।

ತೂಗಿರೆ ವರಗಿರಿ ದೇವಾದಿ ದೇವನ
ಜೋಯಂದು ತೊಟ್ಟಿಲ ತೂಗಿರೆ । ತೂಗಿರೆ......

ನಾಗಲೋಕದಲಿ ನಾರಾಯಣ ಮಲಗ್ಯಾನ
ನಾಗಕನ್ನೆಯರು ಬಂದೊಮ್ಮೆ ತೊಟ್ಟಿಲ । ತೂಗಿರೆ......

ಇಂದ್ರ ಲೋಕದಲಿ ಮಂದಾರ ಮಲಗ್ಯಾನ
ಬಂದೊಮ್ಮೆ ಕಂದನ ತೊಟ್ಟಿಲ । ತೂಗಿರೆ.

ಹೀಗೆ ಕಂದನನ್ನು ಪ್ರಕೃತಿಯನ್ನು ಹೋಲಿಸುತ್ತ ತನ್ನ ತಲೆಯ ಮೇಲಿನ ಜಡೆ ತಿರುಹುವಳು. ಒಮ್ಮೆ ನವಿಲುಗರಿಯನಗಾಡಿಸುತ್ತ ವಿಲಾಸದಿ ಹೆಜ್ಜೆ ಇಡುವಳು. ಈ ಕೊರವಿ ಬರುವ ದೃಶ್ಯವನ್ನು ಪುರದ ಜನರು ಅಮ್ಮಮ್ಮ ಇವಳ್ಯಾವ ದೇಶದ ಕೊರವಂಜಿ, ಹಗಲೆ ಚಂದ್ರನು ಉದಯಿಸಿಬಂದಂತೆ ಬರುವಳಲ್ಲಾ ಎಂದು ಜನರು ನೋಡಿ ಆನಂದ ಪಡುವರು. ಆಗ ಊರಜನರಿಗೆ ತನ್ನ ಜೀವನ ರೀತಿ ಹೀಗೆ ಹೇಳುತ್ತಾಳೆ.

ಹರವೇ ಸೊಪ್ಪು, ಬೆರಕೇ ಸೊಪ್ಪು, ಮಂಗರವಳ್ಳಿಗಳನ್ನು ತುಂಬಿ ತಂದೆ, ಹಳ್ಳಿಗಳನ್ನು ಸುತ್ತಿ ಸುತ್ತಿ ಸಾಕಷ್ಟು ಜೋಳ ತಂದೆ. ಆ ಜೋಳವನ್ನು ಪ್ರೀತಿಯಿಂದ ಗಂಡನಿಂದ ಬೀಸಿಸಿದೆ. ಮುದುಕಿ ಅತ್ತೆಮ್ಮನಿಂದ ರೊಟ್ಟಿ ಬೇಯಿಸಿದರೆ, ಆ ಮೇಲೆ ಭಿಕ್ಷೆ ಬೇಡಲು ಅತ್ತೆಯನ್ನು ಊರುರಿಗೆ ಕಳುಹಿಸಿಕೊಟ್ಟೆ. ಸರಸ ಮಾತನಾಡಿ ಗಂಡನನ್ನು ಎಮ್ಮೆ ತರಲು ಕಳುಹಿಸಿದರೆ, ಅಗಸೇ ಎಣ್ಣೆ, ರೊಟ್ಟಿ, ಭಿಕ್ಷೆಯ ಬೆಲ್ಲದಚ್ಚುಗಳನ್ನು ಸಾಕಾಗುವಷ್ಟು ತಿಂದೆ, ಅನಂತರ ತೃಪ್ತಿಯಾಗುವಷ್ಟು ಮಜ್ಜಿಗೆ ಕುಡಿದೆ, ಎಲೆ ಅಡಿಕೆಗಳನ್ನು ಗಂಟಿನಲ್ಲಿ ಕಟ್ಟಿಕೊಂಡೆ, ಒಳ್ಳೆಯ ಸ್ಥಳ ನೋಡಿ ಮಂಚ ಹಾಕಿಕೊಂಡೆ, ಏಕ ಚಿತ್ತದಿಂದ ಒಳ್ಳೆ ಪದಗಳನ್ನು ಹಾಡಿದೆ. ಅನಂತರ ಬುಕ್ಕಿಟ್ಟು ತೆಗೆದುಕೊಂಡು ಮೂಗಿಗೆ ಹಚ್ಚಿಕೊಂಡೆ, ಲೆಕ್ಕಾವಿಲ್ಲದಷ್ಟು ಮಲ್ಲಿಗೆ ಹೂಗಳನ್ನು ಕೇದಗೇ ಹೂಗಳನ್ನು ತಂದೆ, ಅಕ್ಕಂದಿರಿಗೂ ತಮ್ಮಂದಿರಿಗೂ ಗೂಡಿಸಲನ್ನು ಒಪ್ಪಿಸಿ, ಈ ಕೇರಿಯಲ್ಲಿ ಕಣಿ ಹೇಳಲು ಬಂದೆ ಎಂದು ಹೇಳುವ ಕೊರವಂಜಿಯ ಸುದ್ದಿ ದ್ವಾರಾವತಿಯೊಳು ಪ್ರಸಾರವಾಗಿ ದೂತಿಯರು ಈ ವಾರ್ತೆ ಕೇಳಿ ಸತ್ರಾಜಿತ ರಾಜನ ಮಗಳಾದ ಸತ್ಯಾಭಾಮಾರಲ್ಲಿಗೆ ಬಂದು ಕೊರವಿಯ ಚೆಲುವಿಕೆಯನ್ನು ಆಕೆಯ ದಿವ್ಯತೈಜಸ್ಸನ್ನು ವರ್ಣಿಸುತ್ತಾರೆ.

ರಾಗ – **ಮುಖಾರಿ** ತಾಳ – **ಅಟ**

ಕೊರವಿ ಬಂದಳಮ್ಮ ಈ ಪುರದೊಳಗೆ ಕೊರವಿ ಬಂದಳಮ್ಮಾ
ನೆಂದದೆ ಜನವೆಲ್ಲಾ ಒಂದರೀದೇನ್ದೇಳಲಿ ಕೊರವಿ ಬಂದಳಮ್ಮಾ ॥ ಪಲ್ಯ ॥

ಮಚ್ಚೆಗಂಗಳೊ ಮದನ ಬಾಣಂಗಳೊ
ಪೆಚ್ಚಿನ ಕುಚತಟವೊ ಸುವರ್ಣ ಘಟವೊ
ಬೆಚ್ಚಿದಾ ಮೃಗ ಮಧ್ಯವೊ ಕಾಣಲಸಾಧ್ಯವೊ
ಅಚ್ಚ ನೀಲವೇಣಿಯೋ ಕಾಳಾಹಿ ಫಣಿಯೊ ॥ ೧ ॥



ರೂಪದಲ್ಲಿ ರತಿಯೊ ಪಾರ್ವತಿಯೋ ಪ್ರ
ತಾಪದಲ್ಲಿ ಸವಿತರಳೊ, ಸುಧಾರಕಳೊ
ಆ ಪುಣ್ಯವಚನದಿ ವಾಣಿಯೋ, ಬ್ರಹ್ಮಾಣಿಯೊ
ನೂಮಕಿ ಕಾಲಾಟದಿ ರಂಭೆಯೋ ಸ್ವರ್ಣ ಬೊಂಬೆಯೋ ॥ ೨ ॥

ಸುಳಿಕುಂತಳವೊ ಅಳಿಗಳಾ ಪಂಕ್ತಿಯೊ
ಹೊಳೆವ ಹಲ್ಲುಗಳೊ ವಜ್ರದ ಸಾಲುಗಳೊ
ತಳಿರಧರವೊ ಅಥವಾ ಮಧುರವೊ
ಇಳೆಯಾಳಿನ್ನಿವಳಾವಳೋ ಕೊರವ್ಯೊ, ಕಲ್ಪತರುವೊ ॥ ೩ ॥

ದೂತಿಯರಿಂದ ಕೊರವಂಜಿಯ ವರ್ಣನೆ ಕೇಳಿದ ಸತ್ಯ ಭಾಮೆಗೆ ಮನದಲ್ಲಿ ಅಲ್ಲೋಲಕಲ್ಲೋಲವಾಗಿ ಕೊರವಿಯನ್ನು ಕರೆತರಲು ಧೂತಿಯರನ್ನು ಕಳುಹಿಸಿಕೊಡುತ್ತಾಳೆ. ಧೂತಿಯರು ಕೊರವಂಜಿಯಲ್ಲಿಗೆ ಬಂದು ಸತ್ಯಭಾಮೆಯು ಭಿನ್ನಹವನ್ನು ತಿಳಿಸುತ್ತಾರೆ. ಆಗ ಕೊರವಂಜಿ ಸತ್ಯಭಾಮೆಯ ಅಂತಃಪುರಕ್ಕೆ ಬರಲು ತನ್ನ ಹೆದರಿಕೆಯನ್ನು ಸೂಚಿಸುತ್ತಾಳೆ.

ದೊರೆಸಾನಿಯ ಹೆಸರೇನ್ದೇಳೆಲೆ
ಧೊರೆಯಾದವನೀ ದ್ವಾರವತಿಪುರ
ದರಸೆ ಯದುವರ ಶ್ರೀಕೃಷ್ಣನರ್ಧಾಂಗಿಯಹುದೇ
ನೆರಳಿಗೆ ನಾವಂಜುವೆವು. ಎಲೆ ಎಲೆ
ಧೊರೆಗಳ ಸಂಗವು ನಮಗ್ಯಾಕೆ
ಪರಿಶುದ್ಧ ಪತಿ ವೃತಿ, ಕೃಷ್ಣ ಹರಲಿಗೆ ಧರವಲ್ಲನಮಗೆ

ಆಗ ಧೂತಿಗೆ ಬಂದು ಪರಿಪರಿ ಬೇಡಿ ತಮ್ಮ ದೊರೆಸಾನಿಮನಿಗೆ ಬರಲು ತಿಳಿಸಿದಾಗ ಮೊದಲಮೊದಲು ನಾನು ನಿಮ್ಮರಸಿಯ ಗುತ್ತಿಗೆಯಾಳೆ? ಎಂದು ಹೇಳಿದರೂ ಕೊನೆಗೆ ಬರಲ ಒಪ್ಪಿ

ಸತ್ಯಭಾಮೆಯಲ್ಲಿಗೆ ಬಂದಳು. ಅವಳ ಸುಂದರ ರೂಪ, ಮಧುರ ಮಾತು ಭಾಮೆಯ ಹೃದಯವನ್ನು ಕಲಕಿದವು. ಕೊರವಂಜಿಯನ್ನು ನೋಡುತ್ತಲೆ ವಿರಹ ತಾಪವು ಹೆಚ್ಚಿ ತಮ್ಮ ಇವಳೆಲ್ಲಿ ಕೊರವೇ ಮನ್ಮಥ ಮಸೆದ ಶರವೇ ಎಂದು ವಿಲಿವಿಲಿ ಒದ್ದಾಡುತ್ತಾಳೆ. ಪುರುಷರಲ್ಲಿ ಮನವೆರಗಬಹುದು, ದೇಶ ಸಂಚಾರ ಮಾಡುವ ಕೊರವಿಯ ಇಷ್ಟು ಆಕರ್ಷಣೆಯೇ? ಈ ನನ್ನ ಕುಚಗಳಲ್ಲಿ ರೋಮಾಂಚನವಾಗುತ್ತಿದೆ. ಅಲ್ಲದೇ ಮುಖವೇಕೆ ಬೆವರು ಬೀಡಬೇಕು? ಎಂದು ಚಡಪಡಿಸುತ್ತಾಳೆ. ಅನೇಕ ಸಂಶಯ ತಾಳಿದ ಮೇಲೆ ಇವಳು ಕಪಟೆ ಕೊರವಂಜಿ ಎಂದು ತೋರುತ್ತದೆ. ಅನಂತರ ಮಾತು ಗಟ್ಟಿಯಾಗಿ ಕೊರವಿಯನ್ನು ಮಾತನಾಡಿಸುವ ತೀರ್ಮಾನಕ್ಕೆ ಬರುತ್ತಾಳೆ ಸತ್ಯಭಾಮೆ.

**ಪದ್ಯ :** **ರಾಗ ; ಸೌರಾಷ್ಟ್ರ :**

ಧನ್ಯಳಾದೀನೆ ಕೊರವಿ ನಿನ್ನ ರೂಪವ ಕಂಡು
ರನ್ನೆ ಶಿವಸತಿಯೆ ನೀನೆಂದು ಕರೆಸಿದೆನೇ
ನೆನೆಸಿ ಕೊಂಬೆನೆ ಎನ್ನ ಮನದೊಳಿದ್ದುದು ಹೇಳೇ
ಘನತರಕೆ ಬರಿವೃತ್ತಕುಚ ಹೊನ್ನ ಬೊಗರಿ ।

ಪತಿಯು ಪರದೇವತೆಯು ಪತಿಯಿಂದ ನೈಜಸುಖಾ
ಪತಿಯಿಂದ ಮೈದೆತನ ಪತಿಯಿಂದ ಸೌಭಾಗ್ಯ
ಪತಿಯಿಂದ ವಾತ್ಸಸುಖ, ಪತಿಯಿಂದ ಶೃಂಗಾರ
ಪತಿಯೆ ಗತಿ ಜೀವಕ್ಕೆ, ಪತಿಯೆ ಹೀತ ದೇಹಕ್ಕೆ
ಪತಿಯಿಂದಲೆ ಪ್ರಜಾವಂತಿ, ಸೀಮಂತಿ, ಶೃಂಗಾರವಂತಿ
ಪತಿಗಾ ಆತ್ಮಬಂಧುಗಳ ಬಿಡುವರು ಮತ್ತಾ
ಪತಿಗಾಗಿ ಹೆತ್ತವರ ಜರಿದು ಬಿಡುವರು ಆತ್ಮ
ಪತಿಯ ಹಳಿಯೆ ಯಜ್ಞದೊಳು ಧುಮುರೆದಳುಮಹಾ
ಪತಿವೃತೆ ದಕ್ಷಪ್ರಜೇಶ್ವರನ ತನೊದ್ಭವೆಯು
ಪತಿಗಾಗಿ ಅರಣ್ಯವಾಸಿಯಾದಳು ಸೀತೆ, ಮತ್ತಾ
ಪತಿಗಾಗಿ ಸೈಳೇಂಧ್ರಿಯಾಗಳೆ ದೃಪದ ತನುಜೆ
ಪತಿಯಸೊಲಿಸಿದ ಹೆಣ್ಣು ಮಣ್ಣು ಪಾಲೆಗತಿ
ಪತಿಯಿಂದಧಿಕರಿಲ್ಲಾ, ಪೃಥ್ವಿಯೊಳಗೆಲ್ಲಾ
ಪತಿಯಿಲ್ಲದಾ ಯುವತಿ ಪಾಷಾಣವಲ್ಲೆ ಕೇಳಿಬಲ್ಲೆ ।

ಪತಿಗೆ ಊಡಿದಳು ಒಲವು ಮದ್ದು ಎನ್ನಸಂವತಿ
ಪತಿ ಪರಾಧೀನನಾದನೆ, ಯಾಕೆ ಯುವತಿ
ಪತಿಯಗಳ ಬಿಟ್ಟಗಲಲೊಲ್ಲ ಅರಘಳಿಗೆ
ಪತಿಯ ಕಟ್ಟ್ಯಾಕಿದಳು ಮೋಹಪಾಶದಲಿ

---

ಈ ಪದ್ಯಗಳು : ಶ್ರೀ ಜಿ. ಆರ್. ಕುಲಕರ್ಣಿಯವರ ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತದಿಂದ ಆಯ್ದುಕೊಂಡಿದೆ.

ನಗೆಯೆಂಬ ಮಲ್ಲಿಗೆಯ ಮೆಚ್ಚು ಚಲ್ಲಿದಳು, ಕುಚ
ಯುಗ ಜಂಭೀರಗಳಿಂದ ಅಕಟ ಕಟ್ಟಿದಳು
ಅಧರ ಮಧುರವ ಕುಡಿಸಿ ಮದವೇರಿಸಿದಳು
ಬದಿಯಗಲದಂತೆ ಭಾಷೆಯ ಕೊಂಡಳಂತೆ

ಪತಿವಿವರ್ಣವ ವರ್ಣಿಸಿ ಕೇಳಿದಲ್ಲೇ
ಪತಿಯಗಲಿದೀ ದೇಹ ಹೆಮ್ಮರಾ ನೀ ಬಲ್ಲೇ
ಸತಿ ಕೇಳೆ, ನೀನಾವದೇಶದೊಳಿರುವೆ?
ಪತಿಯಾರು, ನೀನಾವ ಜನಪದದ ಕೊರವೆ?

ಕೊರವಿ ನಿನ್ನ ರೂಪವನ್ನು ಕಂಡು ಧನ್ಯಳಾಗಿದ್ದೇನೆ. ನನ್ನ ಮನದಲ್ಲಿದ್ದುದನ್ನು ಹೇಳು ಪತಿಯಿಂದಲೆ ನೈಜ ಸುಖ, ಪತಿಯಿಂದಲೇ ಸೌಭಾಗ್ಯ, ಪತಿಯೇ ಪರದೈವ ಹೀಗಿರಲು ಸವತಿ ನನ್ನ ಪತಿಗೆ ಮದ್ದು ಮಾಡಿದ್ದಾಳೆ. ನಾನು ಪತಿಪರಾಧೀನೆಯಾಗಿದ್ದೇನೆ. ಅವಳನ್ನು ಬಿಟ್ಟು ಪತಿ ಅರಘಳಿಗೆಯೂ ಇರಲಾರ. ಮೋಹ ಪಾಶದಲ್ಲಿ ಕಟ್ಟಿಹಾಕಿದ್ದಾಳೆ. ನನಗೆ ಪತಿಯ ಪರದೈವವ ಪರಮೇಶ್ವರ ಎಂಬ ಮಾತನ್ನು ಸತ್ಯಭಾಮೆ ಸ್ಪಷ್ಟಪಡಿಸಿದ್ದಾಳೆ. ಕುಟುಂಬದಲ್ಲಿ ಪತಿ–ಪತ್ನಿಯರು ರೀತಿ–ನೀತಿಗಳನ್ನು ಪರಸ್ಪರ ಅರಿತು ನಡೆಯಬೇಕು. ಅದರಂತೆಯೆ ಕುಟುಂಬದಲ್ಲಿ ಸಾಮರಸ್ಯದಿಂದ ನಡೆದುಕೊಳ್ಳುವುದೇ ಮಾನವ ಜೀವನದ ಮುಖ್ಯ ಆದರ್ಶವೆಂಬುದನ್ನು ನಮ್ಮ ಜಾನಪದರು ಚೆನ್ನಾಗಿ ಅರಿತುಕೊಂಡಿದ್ದಾರೆ. ಅಂತಲೇ ಅಂತಹ ಸಾಮರಸ್ಯದ ಜೀವನವನ್ನು ಅವರು ಮನಸಾರೆ ಮೆಚ್ಚಿ ಹೊಗಳುವರು. ಇಂತಹ ಸಮತೆಯಿಲ್ಲದೆ ವಿಷಯ ಭಾವದಿಂದ ಕೂಡಿದ ಜೀವನವನ್ನು ಅಸಾಧುವ್ಯಕ್ತಿಗಳನ್ನು ನೇರವಾದ ನಿಂದಾವಚನಗಳಿಂದ ತೆಗಳುತ್ತಾರೆ. ಈ ಸಮಾಜದಲ್ಲಿ ವಿವೇಚನಾರಹಿತವಾದ ಮತ್ತು ಕರ್ತವ್ಯ ನಿಷ್ಠೆಯಿಲ್ಲದವರಾದ ವ್ಯಕ್ತಿಗಳೇ ಬಹು ಸಂಖ್ಯಾಕರಾದುದರಿಂದ ಅವರ ಸಾಹಿತ್ಯದಲ್ಲಿ ಅಂತಹವರ ಅಣಕ–ತೆಗಳಿಕೆಗಳಿಂದ ಕುಡಿರುವುದೇ ಹೆಚ್ಚು. ಆದರೆ ಹೊಗಳಿಕೆ ತೆಗಳಿಕೆ ಜೀವನ ಎರಡು ಮುಖಗಳೆ ಆಗಿವೆ. ಜೀವನ ಕಷ್ಟ–ಸುಖಗಳ ಸಾಗವಾಗಿದೆ. ಅದರಲ್ಲಿ ಹೆಣ್ಣು–ಗಂಡು ಒಂದು ನಾಣ್ಯದ ಎರಡು ಮುಖಗಳೆಂಬುದು ತಿಳಿದಿರಬೇಕು. ಅದಕ್ಕಾಗಿ ನಾವು ಕುಟುಂಬ ಜೀವನ ಸಾಮರಸ್ಯ–ಸುಖ–ಸಂತೃಪ್ತಗಳನ್ನು ಬಯಸುವುದು ಪತಿ–ಪತ್ನಿರಲ್ಲಿ ಕುಟುಂಬ ಜೀವನದ ದಾಂಪತ್ಯ ಸುನೀತಿ–ಸುಗುಣಗಳಿಂದ ಬಿಗಿ ಪಡೆಯಬೇಕೆಂಬುದು ನಮ್ಮ ಸಮಾಜದ ಹಿರಿಯ ಬಯಕೆಯಾಗಿದೆ. ಹೆಣ್ಣು–ಗಂಡುಗಳ ಪರಸ್ಪರ ಆಕರ್ಷಣೆ–ಪ್ರೀತಿಗಳು ನೈಸರ್ಗಿಕವಾದರೂ ಸಮಾನದ ಮೈತ್ರಿ ಸೌಹಾರ್ದ–ಸೌಕರ್ಯ–ಶಾಂತಿ ಶಿಸ್ತುಗಳ ಸಂರಕ್ಷಣೆಯ ಮೂಲಕ ತಮ್ಮ ಬಾಳಿನಲ್ಲಿ ಮನಸ್ಸು ಹೃದಯಗಳ ಮೀಲನವಾಗಿವೆ. ಈ ಕಾರಣದಿಂದಲೇ ಸತ್ಯಭಾಮೆ ಶ್ರೀಕೃಷ್ಣನನ್ನು ಬಿಟ್ಟಿರಲು ಸಾಧ್ಯವಿಲ್ಲ, ಇದ್ದರು ಇರಬಹುದಾಗಿತ್ತು. ಆದರೆ ಶ್ರೀಕೃಷ್ಣ ರುಕ್ಮೀಣಿಯ ವಾಸದಲ್ಲಿದ್ದಾನೆ. ಅದನ್ನು ಈಕೆ ಸಹಿಸುವುದಿಲ್ಲ. ಇಂದು ಕೂಡಾ ಮಹಿಳೆ ತನ್ನ ಗಂಡ ಎನೆಲ್ಲಾ ಮಾಡಿದರು ಸಹಿಸುತ್ತಾಳೆ. ಆದರೆ ಬೇರೆ ಸತಿಯಲ್ಲಿದ್ದರೆ ಸಹಿಸುವುದಿಲ್ಲ ಎಂಬ ಮಾತು ಈ ಪದ್ಯದಿಂದ ತಿಳಿದು ಬರುತ್ತದೆ. ಆಗ ಕೊರವಂಜಿ ಸತ್ಯಭಾಮೆಗೆ ತನ್ನ ಪರಿಚಯವನ್ನು ಈ ರೀತಿ ಹೇಳುತ್ತಾಳೆ.

ರಾಗ – ಯರಕಲಕಾಂಬೋದಿ ತಾಳ – ಆಟ

ಗಂಡನೆನಗಿಲ್ಲಾವೆ ಹೆಂಡಿರನಾಳುವೆ
ಗಂಡುಗಾದೇವಿ ನಾರಾಯಣಿಯೆಂಬೋರುಯನ್ನಾ
ಥಂಡಥಂಡಾ ದೇವ–ದೈತ್ಯರ ಕೈಯಾಪೂಜೆ
ಗೊಂಡ ಹೆಂಗಳ ಗಾಡಿ ಕಾರ್ತಿ ಕೊರವಂಜಿ ನಾನು ॥ ೧ ॥

ಬೊಮ್ಮ ನಮ್ಮನೆಯ ಹೆಮ್ಮಗದ್ಧಿರಿಯಾನು
ಹಮ್ಮಿನ ಜಿತದಾಳು ಹನುಮಾಗೆ ನವವಿಧ
ಹಮ್ಮಿಣಿ ಹಣಕೊಟ್ಟೆ ಹೊಂದಿಸಿದವನು
ಉಮಾಪತಿಯು ಎನಗೆ ಮೊಮ್ಮಗನೆ ಮೋಹಿನೀ ॥ ೨ ॥

ಲಚ್ಚಿಯೆಂಬುವಳೆನ್ನ ಇಚ್ಚೆಯ ಪರಿವಾರಿ
ಕಚ್ಚಲಂಜುವುದೆನ್ನ ಅಚ್ಚ ಬೆಳ್ಳಹಿ ಬೆನ್ನಾ
ನಿಚ್ಚ ಹಾಸಿಕೆ ಮಾಡಿ ಬೆಚ್ಚಾದೆ ಮಲಗುವೆ
ಇಚ್ಚೆ ಬಂದಲ್ಲಿ ಪಕ್ಷಿಯನೇರಿ ತಿರುಗುವೆ ॥ ೩ ॥

ಹಾಲು ಹಳ್ಳದೊಳೆನ್ನ ಮನೆಯುಂಟು ಅನಂತಾ
ಶಾಲೆಯೊಳಗೆ ಈಡುಂಟು ಸಟಗಳಲ್ಲಿ
ಮ್ಯಾಲೆ ಶ್ರೀ ಭಾಗಾದೊಳು ಅಳವಿಲ್ಲದರಮನೆ
ಪಾಲು ಬೇಡುವಂಥಾ ದಾಯಾಧ್ಯರೆನಗಿಲ್ಲಾ ॥ ೪ ॥

ನಿದ್ರೆ ಬಂದಲ್ಲಿ ಯೋಗ – ನಿದ್ರೆಯ ಮಾಡುವೆ
ಸುದ್ದಿಯ ತರಲೊಬ್ಬ ಉದ್ಧವ ಎನಗುಂಟು
ಕದ್ದು ಮಾಜುವಳಲ್ಲಾ ಕರದಾವರಲಿ ಉಂಬೆ
ನಿದ್ದಿಸಿ ಕೇಳೆನ್ನಾ ಸೊಲ್ಲಾ ಹೇಳುವೆನೆಲ್ಲಾ ॥ ೫ ॥

ಇಲ್ಲಿ ಕೊರವಂಜಿಯು ತನ್ನ ಪೂರ್ಣ ಪರಿಚಯವನ್ನು ಸತ್ಯಭಾಮೆಗೆ ಮಾಡಿಕೊಡುತ್ತಾಳೆ. ಅಲ್ಲದೆ ಕೊರವಂಜಿಯ ಜ್ಞಾನ ಪಾಂಡಿತ್ಯವು ಸತ್ಯಭಾಮೆಗೆ ಬೆರಗು ಗೊಳಿಸುವಂತಹದ್ದು.

ನನಗೆ ಗಂಡರಿಲ್ಲ. ಹೆಂಡಿರನ್ನಾಳುತ್ತೇನೆ. ನನಗೆ ನಾರಾಯಣಿ ಎನ್ನುತ್ತಾರೆ. ಅಸಂಖ್ಯಾ ದೇವ–ದೈತ್ಯರಿಂದ ಪೂಜೆ ಮಾಡಿಸಿಕೊಳ್ಳುವ ಕೊರವಂಜಿ ನಾನು ಎಂದು ತಿಳಿಸಿ ಅದೇ ರೀತಿ ಮುಂದುವರೆದು ಹೇಳುವ ಪರಿಚಯ ವಿಷ್ಣುವಿನ ಅವತಾರಗಳಿಗೆ ಸಂಬಂಧಿಸಿದ್ದಾಗಿದೆ.

ತರುವಾಯ ಕೊರವಂಜಿಯ ಸತ್ಯಭಾಮೆಯ ರೂಪ ಸೌಂದರ್ಯವನ್ನು ಮೆಚ್ಚಿ ವರ್ಣಿಸಿ, ಮನದಲ್ಲಿಯ ಚಿಂತೆ ಬಿಡುವಂತೆ ಧೈರ್ಯವನ್ನು ಹೇಳುತ್ತಾಳೆ.

**ಪದ್ಯ :**

ತೆಳ್ಳಾನ ಹೊಟ್ಟೆವಳೆ ತಾವರಿಯ ಮೊಗದವಳೆ
ಬಳ್ಳ ಬಳಕುವ ಉಂಗ್ರನಡುವಿನೊಯ್ಯಾರಿ
ಡೊಂಕದುರುಬಿನ ಹರದಿ, ಶಂಖ ಕೊರಳ ವಧೂಟಿ
ಪಂಕರುಹ ಪಾಣಿ, ಪಟುತರದ ಶುಕವಾಣಿ
ತೊಂಡಿ ಪಣ್ದುಟಿ ಬಾಳೆದಿಂಡುದೋಳಿನ ಹೆಣ್ಣೆ
ಮಿಂಡೆವೆಗ್ಗಳೆ, ಮದ್ದು ಗುಲುಕುಲಾಡಿ
ಸುಲಿಪಲ್ಲ ಸೊಬಗೆ, ಸಂಪಿಗೆ ಮೊಲ್ಲೆ – ಮೂಗಿನಲಿ
ನಲಿವ ಹುರುಮಂಜು ಮುತ್ತಿನ ಮುರುಕಲಾಡಿ
ಗುರು – ಕುಚದ್ವಯದ ಭಾರಕೆ ಬಾಗಿದ ಗುಜ್ಜೆ
ಸ್ಮರನ ಕಾರ್ಮುಕ ಭ್ರೂಲತೆ, ನೀಲಕುಂತಳೆಯೆ
ಥಳ ಥಳಿಸುವ ಕಪ್ರೋಲೆ, ಪೊಳೆವ ಚಂಪಕ ಮಾಲೆ
ಎಳೆವಳ್ಳಿಯೂ ಪೋಲ್ವ ಮೃದುತನು ಮೊಳಕೆನಗೆಯುವಳೆ
ಬೆದರಿದ ಕುರಂಗಾಕ್ಷಿ, ಮದನ ಕದನಾಪೇಕ್ಷಿ
ಎದುರಿಲ್ಲ ನಿನ್ನ ಸೌಂದರ್ಯಕ್ಕೆ ಏನೆಂಬೆ ।
ನಿನ್ನ ಪುಟ್ಟಿಸಿದ ಬ್ರಹ್ಮನೇ ಬ್ರಹ್ಮ । ಉದರದಲಿ ಹೆತ್ತಾಯಿ
ಧನ್ಯಳು ಸತ್ರಾಜಿತ ಕುವರೀ
ನಿನ್ನಾಳ್ವ ಪುರುಷನೆ ಪರಮಪುರುಷ
ನಿನ್ನ ಕಡೆಗಣ್ಣ ನೋಟಕ್ಕವನೆ ಪಾತ್ರ
ನಿನ್ನ ಸರಿಗಾಣೆ ಹೆಂಗಳೆಯರೊಳು ಮೂಲೋಕದೊಳು ।
ನಿನ್ನ ಮೆಚ್ಚದೆ ಮೆಚ್ಚಿದೆನೇಳಂಬುಜಾಕ್ಷಿ
ನೀನಿದ್ದ ಆರಣ್ಯ ಅತಿಶಯದ ಸಾಮ್ರಾಜ್ಯ
ನೀನಿದ್ದ ದ್ವಾರಾವತಿ ಅಮರಾವತಿ ಗಿಂದಧಿಕ
ನೀನೆ ಜಯವಂತೆ, ಸೀಮಂತೆ, ಸಿಂಗಾರವಂತೆ
ನೀ ನಿನ್ನ ಮನಕೆ ಬಂದಂತೆ ಕೇಳಲೆ ಕಾಂತೆ
ಬಿಡು ನಿನ್ನ ಮನದ ವೈಕ್ಲಬ್ಯ ಹೇಳುವೆನೆಲ್ಲಾ
ನಡೆತಾರೆ ಮಂಚದಿಂದಿಳಿಯು ಅಂಚೆಗಮನೆ ॥ ೧ ॥

ಆ ಮೇಲೆ ತನ್ನ ವಿದ್ಯಯ ಬಗೆಗಿರುವ ವಿಶ್ವಾಸವನ್ನು ಅಭಿಮಾನದಿಂದ ಹೇಳುತ್ತಾಳೆ.

ಸಾಮುದ್ರಿಕೆಯ ಬಲ್ಲೆ, ಶಕುನ ಹೇಳಲು ಬಲ್ಲೆ
ಪ್ರೇಮದಿಂ ಬಿಟ್ಟ ಗಂಡನ್ನ ಒಲಿಸಿ ಕೊಡಬಲ್ಲೆ
ವೃದ್ಧ – ಯೌವನವ ಅಭಿವೃದ್ಧಿ ಮಾಡಲುಬಲ್ಲೆ
ಪೊದ್ದು ತೀರಿಸುವ ಒಲಿಸುವ ಮದ್ದುಗಳ ಬಲ್ಲೆ
ಕೆಟ್ಟ ಸಂವತಿಯ ಬಾಯಿ ಕಟ್ಟು ಮಾಡಲು ಬಲ್ಲೆ

ಹುಟ್ಟು ಬಂಜೆಗೆ ಧಿಟ್ಟ ಮಕ್ಕಳನ್ನು ಕೊಡಬಲ್ಲೆ
ಲಗ್ನ ಹಿಡಿಯಲು ಬಲ್ಲೆ, ನವಗ್ರಹ ಯಂತ್ರಗಳ ಬಲ್ಲೆ
ಶೀಘ್ರ ಫಲವೀನ ಭಾಡ ಮುಹೂರ್ತಗಳ ಬಲ್ಲೆ
ಆನಂದ ಯೋಗಗಳ ಆಯ್ದುಕೊಡ ಬಲ್ಲೆ
ಸ್ವಾನಂದಗಳ ಕೊಡುವ ಧೂತನ – ಲಕ್ಷಣ ಬಲ್ಲೆ

ಹಕ್ಕಿ ಶಕುನವ ಬಲ್ಲೆ, ಪಕ್ಷಿ ವ್ಯಾಳ್ಯವ ಬಲ್ಲೆ
ಎಕ್ಕೆ ಬೆನಕುಂಟು ನೆನಿಸಿಕೋ ಹೇಳಿಕೊಡ ಬಲ್ಲೆ
ಚಿಂತಾಮಣಿಯ ಬಲ್ಲೆ, ಚೆಲ್ಲ ಹೊತ್ತಿಗೆ ಬಲ್ಲೆ, ನಿ –
ರಂತರ ಬಲವ ಪೇಳ್ವ ಜ್ಯೋತಿಷ್ಯಗಳ ಬಲ್ಲೆ
ಕಷ್ಟ ನಿಡಬಲ್ಲೆ, ಕೈಚಲಕವ ಬಲ್ಲೆ
ತಪ್ಪದಲೆ ವೇತಾಳನೊಶಮಾಡಿ ಕೊಡ ಬಲ್ಲೆ
ಸಾದೇವ ಎನ್ನ ದಾಸರ ದಾಸ; ಸಂಜಯನು
ಯಾದ್ರೀಶ ತಾದ್ರೀಶ ಎನ್ನ ಶಿಷ್ಯರೊಳಗವನೊಬ್ಬ
ಆಕಾಶವಾಣಿಯೆನ್ನಾ ಶ್ರೀತಳು
ಬೇಕಾದರೆನ್ನ ಮಾತು ಭಯ ಭಕ್ತಿಯಲಿ ಕೇಳು
ನಾಡಾಡ ಕೊರವಿ ನಾನಲ್ಲ, ನಿರ್ಮಳಾತ್ಮಳು ನಾನು
ರೂಢಿಯೊಳಶಿವ ಶತ್ರುಗಳ ಗಂಟಲಗಾಣಿ
ತಿರಿತಿಂಬೊ ಕೊರವಿ ನಾನಲ್ಲಾ, ತಿಂಡಿಯಾಸೆಯೆನಗಿಲ್ಲ
ಒರಲೊರಲಿ ಓರ್ವಳನು ವಸ್ತ್ರ ಬೇಡುವಳಲ್ಲಾ
ಖರಿಯ ಬಂದರೆ ಮಾತು ಕರೆದುಕೊಡು ತೋರಿದ್ದು
ಧೋರಿಸಾನಿ ಯಾತರಲಿ ಕೊರತೆಯೆನಗಿಲ್ಲಾ
ಪರ ಹಿತಾರ್ಥಕೆ ವೇಷ ಧರಿಸಿ ತಿರುಗುವೆನು
ಸ್ಥಿರವಾಗಿ ಬಂದೆ ಕಡೆಯಿರವ ಕೊರವಿಯಲ್ಲಾ
ಬ್ಯಾಸರದೆ ಕೇಳಿದರೆ, ಬೈತನಕಾ ಹೇಳುವೆನು
ಏಸು ದೇಶವನೆಲ್ಲ ತಿರುಗಿ ಬಂದೆ ನಾನು

ಹೀಗೆ ಕೊರವಂಜಿಯ ತನ್ನ ಜ್ಞಾನಸಮರ್ಥನೆಗಾಗಿ ಬ್ರಹ್ಮಾಂಡದ ವಿವರಣೆಯನ್ನೆ ಹೇಳುತ್ತಾಳೆ.

ಉದಾ :

ಇಂದ್ರಾಗೆಂಡು ಸಾವಿರವು ಇಂಬುಪೂರ್ವದಲ್ಲೇ
ಅಂದದಗ್ನಿ ದಿಕ್ಪಾಲಕಗೆ ಅದರಷ್ಟು ಕೇಳುನಲ್ಲೆ
ಮುಂದೆ ಕಾಲಾನರಮನೆಯ ದಕ್ಷಿಣ ದಿಗ್ಭಾಗಾ
ಒಂದೇ ಅಳತಿ ಹೆಚ್ಚು ಕುಂದು ಇಲ್ಲಕೇಳೆಯೀಣಾ

ನೈರುತ್ಯನಾ ಮನೆಯು ಕೇಳು ಅದರ ಸರಿಸಾದಲಿ
ವರುಣನಾಲಯವುಂಟು ಪಶ್ಚಿಮ ದಿಕ್ಕಿನಲ್ಲಿ
ತರುಣಿ ಕೇಳು ನೀನು, ವಾಯುವ್ಯನಾ ಬೀದಿಯಲ್ಲಿ
ಮೆರೆವ ಉತ್ತರ ದಿಕಕಿನಲ್ಲಿ ಧನಪತಿಯ ಮನೆಯಲಿ

ಇಂದ್ರ, ಧನಪತಿಯ ಮಧ್ಯೆ ಈಶಾನ್ಯ ಯೋಗಿಯರು
ಹೊಂದಿ ರಾಜಿಸುವುದರಲ್ಲಿ ಅಷ್ಟ ದಿಕ್ಪಾಲಕರು
ಮುಂದೆ ಕೇಳು ಮೇರುವಿನ ಉತ್ತರ ಭಾಗದಲೆ
ಛಂದದಾ ಪರ್ವತಾಂಗಳು ಚೆಲ್ವ ಖಂಡಾಗಳೆ ।

ಹೀಗೆ ಅಷ್ಟ ದಿಕ್ಕಪಾಲಕರು, ವಾರ, ನಕ್ಷತ್ರಗಳ ಕುರಿತು ಮಾಹಿತಿಯನ್ನು ವಿವರಿಸುವಳು. ಅಲ್ಲದೆ ಈ ಭೂಭಾಗವನ್ನು ಛಪ್ಪನ್ನ ದೇಶವನ್ನು ಸಂಚಾರ ಮಾಡಿ ಬಂದಿದ್ದೇನೆ. ತಾನು ನೋಡಿದ ರಾಜ್ಯಗಳು ಇಂತಿವೆ. ಅಂಗಾ, ವಂಗಾ, ಕಳಿಂಗಾ, ಕಾಳಿಂಗಾ, ಕಾಶ್ಮೀರಾ, ಕಾಂಭೋಜಾ, ಸುವೀರಾ, ಸೌರಾಷ್ಟ್ರ ಮಹಾರಾಷ್ಟ್ರ ಮಗಧಾ, ಮಾಳವಾ, ನೇಪಾಳಾ, ಚೋಳಾ, ಪಾಂಚಾಳಾ, ಗೌಳಾ, ಮಲಯಾಳ, ದ್ರಾವಿಡಾ, ಕರ್ನಾಟ, ವೈರಾಟ, ಪುಳಿಂದ, ಗಾಂಧಾರ, ವಿದೇಹಾ, ವಿದರ್ಭಾ, ಕುಂತಳಾ, ಕೈಕೇಯ, ಕೌಸಲಾ, ಶೋಣ, ಟೆರಕಣಾ, ಕೊಂಕಣ, ಮೈಂಧವ, ಸೈಂಧವ, ಯವನ, ಸಾಲ್ವಾ ಈ ಎಲ್ಲ ದೇಶಗಳು ನೋಡಿದ್ದೇನೆ. ಮತ್ತು ಉತ್ತರಕ್ಕೆ ಹೋಗಿ ಉಡುಗೋರೆಗಳು ದಕ್ಷಿಣಕ್ಕೆ ಹೋಗಿ ದನಗಳನ್ನು ತಂದೆ. ಸತ್ಯಭಾಮೆ ಕೇಳು ನಿನ್ನ ಮನದ ಬಯಕೆ ಏನು? ಸಂದೇಹ ಬ್ಯಾಡಾ ಎಂದು ಹೇಳು ಎನ್ನುವಳು. ತರುವಾಯ ಸತ್ಯಭಾಮೆಯನ್ನು ಮುಂದಕ್ಕೆ ಕರೆದು ಕೈತೋರಿಸಲು ಹೇಳುತ್ತಾಳೆ. ಸತ್ಯಭಾಮೆಯ ಬದುಕಿನ ಭೂತ, ವರ್ತಮಾನ, ಭವಿಷ್ಯ ಎಲ್ಲವನ್ನು ಶ್ರೀಕೃಷ್ಣನು ಸತ್ಯಭಾಮೆಯ ಕೈಹಿಡಿದ ಸನ್ನಿವೇಶ, ತೌರಿನ ವಿಷಯಗಳು, ಕರತಳದ ಪದ್ಮಾ, ಎರಡು ಕರಹಲ್ಲು, ಗುರುಕುಚದ ಮತ್ಸ್ಯಾ, ಪೆರತೊಡೆಯ ಚಿಹ್ನ, ಎಲ್ಲವನ್ನು ಹೇಳಿ ಸತ್ಯಭಾಮೆಯ ಛಲದ ಸ್ವಭಾವವನ್ನು ಸ್ಪಷ್ಟಪಡಿಸಿ ಅವಳ ಪರಿವಾರದವರ ಪರಿಚಯವನ್ನು ಹೇಳುತ್ತಾಳೆ. ಅನಂತರ ಕೊರವಂಜಿ ಬೇರೆ ಬೇರೆ ಶಕ್ತಿ ದೇವತೆಗಳನ್ನು ತನ್ನ ಮಾತಿಗೆ ಬೆಲೆಯನ್ನು (ಸತ್ಯ) ಕೊಡಲು ಪ್ರಾರ್ಥಿಸುತ್ತಾಳೆ.

**ರಾಗ – ಪುನ್ನಾಗ ತೋಡಿ** **ತಾಳ – ಅಡಿ**

ಬನ್ನಿರೆನ್ನ ವಚನಕೆ ಬ್ಯಾಗದಿಂದಲಷ್ಟಾದಶ
ವರ್ಣ ಪೀಠಗಳಲ್ಲಿದ್ದ ಪ್ರಸನ್ನ ಮುಖಿಶಕ್ತಿಗಳಿರಾ ॥ ಪಲ್ಲ ॥

ಅಂಬಾ ಬಾರೆ ಜಗದಂಬಾ ಸಂಭ್ರಮದಿಂದಲಿ ನಿನ್ನ ಕೃಪಾವ
ಲಂಬನಗೈದು ಈ ಮುದ್ದು ಕುಂಭ ಕುಚಾನ್ವಿತಿಗೆ
ಹಂಬಲಿಸಿದೆಲ್ಲಾ ಪೇಳ್ವೆನೆಂದು ಪ್ರಲಂಬನ ಮಾಡಿದೆ
ಅಂಬುಜಾಕ್ಷಿ ಅಲಂಪುರಿ ಜೋಗುಳಂಬಾ ಬಾಯೆನ್ನ ವಚನಕೆ ॥ ೧ ॥

ಅಳಿ ಕುಂತಳೇ ನೀನಾದಿ ಸ್ಥಳದಿ ಹೊಳೆವೆ ಪೀಠದಿಮರೆವೆ ನೀನತಿ
ಬಳದ ಶಕ್ತಿಯೆಂದು ನಾನಿನ್ನ ಬಳ ದಿಡಿದು ಕೊಂಡಾಡುವೆ । ನಳಿನ
ಶರಾವಳಿಯ ಹತಿಗೆ ಬಳಬಳಕುವ ಸತ್ಯಭಾಂವಿ ಗೋಂ । ದೊಲವ
ಹೇಳುವೆ ಬಾ ವಚನಕೆ ತುಳಜಾ ಭವಾನಿ ॥ ೨ ॥

ವಲ್ಲಭೆ ಕೆಲದಲೊಲಿದು ಭಕ್ತರ ಸಲಹುವಕಂಜ
ಪಲ್ಲವಪಾಣಿ ನಿನ್ನೆಚ್ಚಿನುನ್ನತ ಉಲ್ಲಾಸದಲ್ಲೆ ತಂದು
ಹುಲ್ಲೆಂಗಗಳಿಗಭಯ ವಚನವನಿಲ್ಲ ಕೊಡುವೆಯೆನ್ನ
ಸೊಲ್ಲಿಗೆ ಸಾಕಾರಿಯಾಗು ಎನ್ನ ಕೊಲ್ಲಾಪುರದ ಮಹಾಮಾಯೀ ॥ ೩ ॥

ರನ್ನದುಡುಗಗೆಯನಿಟ್ಟು, ಚಿನ್ನದೊಡ್ಯಾನಾವನಿಟ್ಟು ಅ –
– ಭಿನ್ನ ಸಂಪದ ಇಹುದು ನೀ ಕಡೆಗಣ್ಣ ಮಾತ್ರದಿ ಈಕ್ಷಿಸೆ
ರನ್ನೆ ಸತ್ರಾಜಿತ ಕುವರಿಗೆ ಮನದನುನಯವನ್ನ ಪೇಳ್ವೆಪ್ರ –
– ಸನ್ನಳಾಗೆನ್ನ ವಚನಕೆ ಏ ಸನ್ನತಿ ಚಂದಮ್ಮಾ ॥ ೪ ॥

ಬೆಜ್ಜರವನ್ನ ಕೇಳುವೆ, ಬೇಡಿದ ಕಜ್ಜಾಯವನ್ನು ಕೊಡವೆ
ಉಜ್ಜುಗದಲಿ ಪೂಜೆಯ ಗೆಯ್ವೆ ಜಗಜ್ಜನನಿ ಮಹಾಮ್ಮಾಯಿ
ಕಜ್ಜಳ ಕಂಗಳ ಕಾಮಿನಿಗೆ ಬಂದಜ್ಜು ತಿಳಿಸಿ ಕೊಡುವೆ ಮುಖ
ದಜ್ಜಕೆ ಬಂದೊದಗು ಉಜ್ಜಯಿನೀ ಮಹಾಂಕಾಳಿ ॥ ೫ ॥

ನಂತರ ದೇವತೆಗಳನ್ನು ತೃಪ್ತಿಗೈಯುವ ಸಲುವಾಗಿ ಮರ (ಕೇರುವ)ದಲ್ಲಿ ಮುತ್ತು ಪಡಸಾಲೆಯಲ್ಲಿ ರಂಗೋಲಿ, ಹಣತೆ ದೀಪಗಳು, ತಯಾರು ಮಾಡಿ, ತಾನು ಕೂಡಾ ಮಣೆಯ ಮೇಲ (ಜಾಕಿಮಣಿ) ಪದ್ಮಾಸನವನ್ನು ಹಾಕಿಕುಳಿತು ಬಲಗೈಯಲ್ಲಿ ವಾದ್ಯ (ಕಿನ್ನರಿ) ನುಡಿಸಿ ಬಿಡಿ ಮುತ್ತುಗಳು ಕಲಕಿ

ಕೈಯಿಂದ ತೂರುತ್ತ ಅಲಂಪುರು ಜೋಗುಳಾಂಬೆ ಕೊಲ್ಲಾಪುರದ ಮಹಾಮಾಯಿ, ಸನ್ನತಿ ಚಂದಮ್ಮ ಮುಂತಾದ ದೇವ-ದೇವತೆಗಳನ್ನೆಲ್ಲ ತನ್ನ ಮಾತಿಗೆ ಶಕ್ತಿ ನೀಡಲು ಪ್ರಾರ್ಥಿಸುತ್ತಾಳೆ. ಅದಲ್ಲದೇ ಅನೇಕ ಪುಣ್ಯಕ್ಷೇತ್ರಗಳ ಕುರಿತು ಸ್ಮರಿಸುತ್ತಾಳೆ.

**ರಾಗ – ಸಾವೇರಿ** **ತಾಳ – ಮಟ್ಟೆ**

ಸೃಷ್ಟಿಯೊಳಿಗಿದ್ದ ಪುಣ್ಯಕ್ಷೇತ್ರ ಮೊದಲಾದ ಅಷ್ಟೋತ್ತರ ಸ್ವಯಂವ್ಯಕ್ತಾ
ಮುಟ್ಟ ನೆನೆವೆ ನಿನ್ನ ಬಯಕೆ ಪೇಳುವೆ, ಸರ್ವ ಇಷ್ಟ ಪರಿಹರವೆ ಕಂಜಾಕ್ಷಿ ॥ ಪಲ್ಲ ॥

ಶ್ರೀ ಪುರುಷೊತ್ತಮ ಕುರ್ಮಪಾದಾ, ದೀಪಾಂತ ಉತ್ತನಪಾದಾ
ಆ ಪರ್ವತ ಶಿವಕಂಚಿ, ವಿಷ್ಣುಕಂಚಿ, ಪಾಪಹರ ಆಖಾಶನಗರಾ ॥ ಪಲ್ಲ ॥

ಭಾಪುರೇ ಭಕ್ತರ ಸಾಗರ, ಭಾರ್ಗವ, ಶ್ವೇತದ್ವೀಪ ಸಹ್ಯಾದ್ರಿಲೋಕಾ
ನೂಪುರೆ ಪಚ್ಚೆ ಕೇಳು, ನಮಿಷಾರಣ್ಯ, ಸುಬ್ರಹ್ಮಣ್ಯ, ವೃಂದವನಾವು ॥ ೧ ॥

ಮಂಗಳ ಗಿರಿ, ಪುಷ್ಪಗಿರಿ, ಪಾಷಾಣಗಿರಿ, ರಂಗಗಿರಿ, ಶ್ರೀಯಾಳ್ವಗಿರಿಯು
ಶೃಂಗಾರವರ ನಾರಾಯಣಗಿರಿ, ಕನಕಾಂಬರಗಿರಿ, ಅಸ್ತಗಿರಿಯು
ಅಂಗನೆ ಕಂಗೊಳಿಸುವಂಥಾ ವೆಂಕಟಗಿರಿ, ದೊಡ್ಡ ವಿಹಂಗಗಿರಿ, ನೀಲಗಿರಿಯು
ಶೃಂಗ ಕುಂತಳೇ ಹಂಗಾಗಿರಿ, ಅಂಜನಾಗಿರಿ, ರಾಮಗಿರಿಯು ॥ ೨ ॥

ಉದಯಾದ್ರಿ, ಕುಂಚಾದ್ರಿ, ವೃಷಭಾದ್ರಿ, ತೋತಾದ್ರಿ, ಬದರಿಕಾಶ್ರಮ, ಸಿಂಹಾದ್ರಿ
ಮುದದಿ ಘಟಿಕಾಚಲ, ಇಂದ್ರಾಚಲ, ಅರುಣಾಚಲ, ಮದನಜನಕ, ವೈಕುಂಠ
ಸುದತಿ ಕೇಳ್ ಮಾರಕಪುರಿ, ವಿಂಧ್ಯಾದ್ರಿಪುರಿ, ಅದೆ ಧರ್ಮಪುರಿ, ಗೋಷ್ಪಪುರಿಯು
ಅದೆ ಹಿರಣ್ಯಪುರಿ, ಬ್ರಹ್ಮಪುರಿ, ಅರಿಕ್ಷೇತ್ರ, ಕುರುಕ್ಷೇತ್ರ, ಧರ್ಮಕ್ಷೇತ್ರ ॥ ೩ ॥

ಹೀಗೆ ಪೃಥ್ವೀಯಲ್ಲಿರುವ ಎಲ್ಲ ಪುಣ್ಯಕ್ಷೇತ್ರಗಳ ಪರಿಚಯ ಸತ್ಯಭಾಮೆಗೆ ಹೇಳುತ್ತಾಳೆ. ಆ ಮೇಲೆ ತನ್ನ ತ್ರಿಕಾಲಜ್ಞಾನವನ್ನು ಸ್ಪಷ್ಟಪಡಿಸಲು ಸತ್ಯಭಾಮೆಯ ಹಿಂದಿನ ಕತೆಯನ್ನು ವಿವರಯೊಂದಿಗೆ ಹೇಳುತ್ತಾಳೆ.

ಆದಿಯಲ್ಲಿ ಸತ್ರಾಜೀತ ಅರಸರೊಳಧಿಕನಾದ ನಿನ್ನ ಪ
–ಡೆದಯ್ಯಾ ಅತಿಭಕುತಿಯಿಂದ
ದಿನಕರನ ಪ್ರಾರ್ಥಿಸಿದ ಘನತಪವ ಗೈದು
ಕನಿಕರಿಸಿ ರವಿ ಕೊಟ್ಟ ಶಮಂತಕವ

ಒದಗಿ ಮನೆಯೊಳಗೆ ಸುವರ್ಣ ಕರೆವುತಿರೆ
ಯದುರಾಯ ತನಗೆಂದು ಇಚ್ಛಿಸುತಿರಲು
ತಾ ತೆಗೆದು ತಮ್ಮಂಗೆ ತವಕದಲಿ ಕೊಡಲು
ಆತ ಬ್ಯಾಟಿಗೆ ಪೊದಲ್ಲಿ, ಮೃಗರಾಜ ಮುರಿದುತಿಂದು
ಮಣಿ, ಒಯ್ಯುತಿರೆ, ಮೃಗನ ಭಲ್ಲೂಕವರಿಸಿ, ಮಣಿ ಒಯ್ದು
ಆವಾಸದಲ್ಲಿ ಮಂಗಳ ತೊಟ್ಟಿಲಿಗೆ ಮತಿ ಮಂಗಳನು ಕಟ್ಟಿ
ಸಗುಣ ಜಾಂಬುವಂತ ಸಂತೋಷದಿಂದಿರಲು
ಇತ್ತ ದುಗುಡಿದಲಿ ವರ ಸತ್ರಾಜಿತರಾಯ
ತೆತ್ತಿಸಿದ ಅಪರಾಧತಿಮಿರ ಹರಿಗೆ
ಪ್ರ ಸೇನನ ತಾ ಕೊಂದು ಮಣಿಯ ಘಮ್ಮನೆ ಘಾತಿಸಿದಾ
ಈ ಪರಿಯಾಡಲೂ ಇಂದಿರಾ ಪತಿಯು
ಕೋಪದಿಂದ ಕಾನನವ ಕುಶಲದಿಂದರಿಸಿ
ಆ ಪ್ರ ಸೇನನು ಅಳಿದ ಅಂಗದ್ಹೆಜ್ಜೆಗಳಾ
ಈ ಪರಿಯಾಡಲಾ ಇಂದಿರಾಪತಿಯು
ಕೋಪದಿಂದ ಕಾನನವ ಕುಶಲದಿಂದರಿಸಿ
ಆ ಪ್ರ ಸೇನನು ಅಳಿದ ಅಂಗದ್ಹೆಜ್ಜೆಗಳಾ
ಈ ಪ್ರಕಾರವುಯೆಂದು ಎಲ್ಲರಿಗೆ ತೋರಿ
ಗುಡ್ಡಕ್ಹೆಜ್ಜೆಯ ಹಾಕಿ, ಘಡ ಘಡಿಪನಾದ
ದೊಡ್ಡದಾಗಿರೆ, ಕರಡಿಯಧೊರೆ ರಾಜನೆಂದು
ಅವನ ಕುವರಿಯು ಅಳಲು ಅವ ನಾಡಮಣಿಯ
ತವಕದಲಿ ತಂದು, ತರಳೆ ನಿನ್ನೆದುರು ಕಟ್ಟಿಹುದು
ನೋಡೆಂದು ಕರುಣಿಸುತಿರಲು
ಬೆಟ್ಟ ದೊಳ ಪೊಕ್ಕು ಹರಿ, ಬಿಂಕದಲಿ ಗೆದ್ದು
ತಂದಾ ಮಣಿ ಕನ್ನಿಕೆಯ ವೃದಜನ ನೋಡೆ
ಬಂದು ನಿಮಯ್ಯ ಶಿರಬಾಗಿ ನಾಚುತಲೆ
ಅಪರಾಧ ಕ್ಷಮಿಸೆಂದು ಆಗ ನಿನ್ನನ್ನು
ತಪನಿತ್ತ ಮಣಿ ಸಹಿತ ತಾನಿತ್ತನಾಗ
ಶ್ರೀಕೃಷ್ಣಪರ್ಣವೆಂದು ಕ್ಲೇಶವನು ಬಿಟ್ಟಾ
ಕೃಷ್ಣ ನಿನ್ನ ಕರವಿಡಿದು ವಿಭವ – ಉತ್ಸವದಿ
ಮಣಿವ್ಯಾಜದಿಂದ ನಿನ್ನ ಅಣುಗೇ ಕೈಕೊಂಡಾ
ಫಣಿಶಾಯಿಕೃಷ್ಣ ತಾ ಪರಮ ಪ್ರಚಂಡಾ;
ಅ ಪರಿಮಿತ ಸ್ನೇಹವನು ಅನ್ಯೋನ್ಯವಮಾಡಿ

ವಿಪರೀತ ಸುಖ ಬಡಿಸಿ ಆದರಿಸಿ ನೋಡಿ
ನಿನ್ನೊಡನೆ ತನು-ಮನ-ಧನವನೊಪ್ಪಿಸಿದಾ
ನಿನ್ನೊಳಗೆ ಸುಖ-ಸುರತ ನೇಮ ತೋರಿಸಿದಾ
ನಿನ್ನ ಬದಿಯಗಲಿ ತಾನಿರನು ಅರಘಳಿಸಿ
ನಿನ್ನ ಮುಖ ಚಂದ್ರಕವನೆ ಚಕೋರಾಖ್ಯ
ನಿನ್ನ ಮುಖ ಕಮಲಕವನೆ ಮಧುಪ ಸೌಖ್ಯ ।
- - - - - - - - - - - - - - - -
- - - - - - - - - - - - - - - -

ಹೀಗೆ ಶ್ರೀಕೃಷ್ಣನು ಬರುವಿಕೆಯ ಕುರಿತು ಭವಿಷ್ಯ ನುಡಿಯುತ್ತಾಳೆ. ಸತ್ಯಭಾಮೆ ನಿನ್ನಲ್ಲಿ ಸಂದೇಹ ಬೇಡ ಆತ ಇಂದು ಅರ್ಧರಾತ್ರೆಗೆ ನಿನ್ನಲ್ಲಿಗೆ ಬರುತ್ತಾನೆ.

ರಾಗ – ಸಾರಂಗ ತಾಳ – ಆಡಿ

ಬಂದಾನೆಂದು ತಿಳಿಯೆ ಸ್ಮರನ ಮಾತಿನ ಗಿಳಿಯೆ ॥ ಪಲ್ಲ ॥

ಸಂದೇಹವ್ಯಾತಕೆ ಸಿಂಧುರ ಗಮನೆ
ಇಂದು ನಡುವೆ ದೂತಿಯರ್‍ಯಾಕೆ, ಚಂದಿರಾನನೆ
ಇಂದು ಯೋಗವು ಬಂದು
ನಿಂದಿದೆ, ಇಂದಿರಾಪತಿ....... ಬಂದಾನೆಂದು ॥ ೧ ॥

ಗೆದ್ದೆ, ಕಾಲಲಿ ಒದ್ದೆ ಕೃಷ್ಣವಾ
ಬಿದ್ದೆ ಸವತೇರಾ ಬೆನ್ನಾ
ಮುದ್ದೆ ತೀರಿತು ಪೊದ್ದೆ ಕೃಷ್ಣಾ ನೀ
ನಿದ್ದ ಸ್ಥಳಕೆ ಅರ್ಧರಾತ್ರೀಲಿ...
ಬಂದಾನೆಂದು. ॥ ೨ ॥

ಪಿಡಿದು ಗಲ್ಲವಾ ತಡದು ತನು ಪೊಂ
ಗೊಡಕುಚಕುಗುರಿಕ್ಕಿ
ತೊಡೆಮ್ಯಾಲಿಟ್ಟು ಒಡಂಬಡಿಸಿ – ಸೋಲು
ಮಡಿಯಾ ವಿಡಿದು ಮುದ್ದಿಡಲು ಶೌರಿ...
ಬಂದಾನೆಂದು ॥ ೩ ॥

ಹೊಟ್ಟೆಯ ಕಂದನ, ಪುಟ್ಟ ಸಿಂಗನಾ
ಮುಟ್ಟುವೆನೇ ಕೊರಳಾಗೆ
ರೊಟ್ಟಿಯ ಮ್ಯಾಲಾಗೆ
ಬುಟ್ಟಿಯ ಮ್ಯಾಲಣೆ, ಕಟ್ಟಿದ ತಾಯಿತಂದೆಗೆ...
ಬಂದಾನೆಂದು ॥ ೪ ॥

ಹೀಗೆ ತನ್ನ ಕಂದನ ಮೇಲೆ, ತಾನು ತಿನ್ನುವ ರೊಟ್ಟಿಯ ಮೇಲೆ, ಶಕುನದ ಬುಟ್ಟಿಯ ಮೇಲೆ, ಶಿವ, ಪಾರ್ವತಿ, ರವಿ, ಭೂಮಿಯ ಮೇಲೆ ಆಣೆಯನ್ನು ನೀಡುತ್ತಾಳೆ. ಮತ್ತೆ ಬಿಡದೆ ಶ್ರೀಕೃಷ್ಣನ ಮಹಿಮೆಗಳನ್ನು ಹಾಡಿ ಹರಸಿ ಇಂದಿನ ರಾತ್ರಿಯೇ ಗರುಡವನ್ನೆರಿ ನಿನ್ನರಮನಿಗೆ ಬಂದು ಸರಸ ಸಲ್ಲಾಪದಲ್ಲಿ ತೊಡುಗುತ್ತಾನೆ ಎಂದು ಹೇಳಿ ಸತ್ಯಭಾಮೆಗೆ ಮೈಪುಳಕವಾಗುವಂತೆ ಹರ್ಷಗೊಳಿಸಿ ಆಕೆಯಿಂದ ಪುಷ್ಪರಾಗದುಂಗುರ, ಮುತ್ತಿನಹಾರ, ಬೀಗರುಕೊಟ್ಟ ಶಾಲು, ಕಾಣಿಕೆಯಾಗಿ ಪಡೆದು, ತಾನು ಹೊಟ್ಟೆ ತುಂಬ ಊಟವ ಮಾಡಿ ಆ ನಂತರ ಕತ್ತರಿಸಿದ ಅಡಕೆ, ಕರ್ಪೂರ ವಿಳ್ಯ, ತನ್ನ ಕಂದನಿಗೆ ಲಡ್ಡುಗೆ ಕೊಡಿಸಿ, ತಾನು ಹೊರಡುತ್ತೇನೆಂದು ಹೇಳಿ ಭಾಮೆಯನ್ನು ಕೃಷ್ಣನನ್ನು ಕುರಿತು ವರ್ಣಿಸುವಳು.

ದುಂಡಿ ನಿನಗಂಡ ಪ್ರಚಂಡ ಉದ್ದಂಡ
ದನುಜನ ಗಂಟಲಗಾಣ ಪಾಂಡವರ ಪಂಚಪ್ರಾಣ ।
ಸುರರೊಡೆಯ ಸುದಾಮನ ಗೆಳೆಯಾ
ಅಸುರರಣರಂಗಧೀರಾ, ಜಾರ–ಚೋರ, ದಯಾಪರ–ಮೂರ್ತಿ
ಶರಣಾಗತರಕ್ಷಕ, ಯದುಕುಲಶಿರೋಮಣಿ
ಸರ್ವಾಭರಣ ಭೂಷಿ ತನಾಗಿ, ಇಂದಿನಿರುಳು
ನಲಿವುತ, ಒಲಿವುತ, ಗರುಡನ ಹೆಗಲೇರಿ ಬಂದಾನು
ಹೊಂದ್ಯಾನು, ಮುಸುಕು ತೆಗೆದಾನು ಮಗ್ಗುಲೊಳು ಕುಳಿತಾನು
ನಸುನಗುತ ನಿನ್ನ ಕೊಸರಿ ತೊಡಿಯಮೇಲಿಟ್ಟಾನು
ಪೊಳೆವ ಗಲ್ಲವ ಮುಟ್ಯಾನು, ಬಾಹುಲತೆಗಳಿಂದ ಕಟ್ಯಾನು
ಅಧಾರಮೃತವ ಸವಿದಾನು, ಮುದ್ದಿಸಿ ಕರೆದಾನು
ನಿನ್ನ ಬೆರೆದಾನು, ಬೆದರದಿರು, ಬೆಚ್ಚದಿರು
ಅರಘಳಿಗೆ ಸೈರಿಸು, ಸೈರಿಸು
ಸಾವಧಾನದಲ್ಲಿರು, ಸಂತೋಷದಲ್ಲಿರು, ರನ್ನೆಶಿರೋಮಣಿಯೇ ॥ ೧ ॥
ಹೋಗಿ ಬರುವೆನು ಕೇಳೆಲೆ ದುಂಡಿ
ಬೈಗಾಗ ಬಂತಲ್ಲೆ ಎಲೆದುಂಡಿ
ತ್ಯಾಗವ ಬೇಡುವೆನು ಎಲೆದುಂಡಿ

ಪುಷ್ಪರಾಗ ದುಂಗುರವ ಕೊಡು ಎಲೆದುಂಡಿ
ಮುತ್ತಿನ ಹಾರವ ಕೊಡೇ ನಿನ್ನ ಗುರುತಾ
ಬೀಗರಿತ್ತ ಶಾಲವಕೊಡೆ, ಮನವರಿತು...........

ಸತ್ಯಭಾಮೆಯ ಕೊರವಿ ಮಾತನ್ನು ಕೇಳಿ ಹರ್ಷ ಚಿತ್ತಳಾಗಿ ಆನಂದದಿಂದ ಕೊರವಿ ಪಾದವನ್ನು ಮುಟ್ಟಿ ತೊಳೆಯುವಾಗ ಶಿವಶಿವಾ ಇದು ಏನು ಸೋಜಿಗವೋ ಅಥವಾ ಆ ಭಗವಂತನ ಮಾಯಾ ಲೀಲೆಯೋ ಈ ಕೊರವಿಯ ಪಾದದಲ್ಲಿ ಪದುಮ, ಅಂಕುಶ ರೇಖೆ ಕಂಡು ಸತ್ಯಭಾಮೆ ಬೆರಗಾಗಿ ಪರಮಾತ್ಮನು ಕೊರವಿ ರೂಪದಾರಣ ಮಾಡಿದನೇ ನನ್ನ ಪ್ರಾಣನಾಥಾ ಎಂದು ಉದ್ಗಾರವೆತ್ತುತ್ತಾಳೆ. ಆನಂತರ ಸತ್ಯಭಾಮೆಯ ಕೊರವಿಗೆ ಉಣಬಡಿಸುವ ಸನ್ನಿವೇಶ ಕವಿ ಈ ರೀತಿ ಹಾಡಿದ್ದಾನೆ.

ಕಡು ಪ್ರೀತಿಯೆಂಬ ಷಡುರಸ ಸಾರವಾ
ಬಡನಡು ಬಳುಕುತಾ ನೀಡಿ
ಮಡದಿ ಶಿರೋಮಣಿ ಮಜ್ಜಿಗೆ, ಶಾಖವಾ
ಇಡುವಳು ಇಂಪಣ ಮಾಡಿ ।
ಭಕ್ತಿಯಾ ಭಿಕ್ಷವು, ಯುಕ್ತಿಯಾ ಶಾಂವಿಗಿ
ವ್ಯಕ್ತಿಯಾ ಅನ್ನ ಶೋಭಿಸಲು
ಶಕ್ತಿಯಾ ವರ ಮಧುರೋಕ್ತಿಯಾ ಘೃತಧಾರೆ
ಮುಕ್ತಿಗೇರಿ ಮನ್ನಿಸಾಲು ।
ಮುಂದಿಟ್ಟು, ಕರಗಳ ಮುಗಿದು ಸತ್ಯಭಾಮೆ
ನಿಂದಾಳು ಮೊಗವ ನೋಡುತಲಿ
ಛಂದಾದಿ ಕೊರವಿ ಇಂಚರದಿ ಶಕ್ತಿಯರನು
ವಂದಿಸೀ ತುತ್ತಾಗೊಳತಾಲಿ ।

ಊಟಕ್ಕೆ ನೀಡಿದಡಿಗೆಯಲ್ಲಿ ಅಷ್ಟಿಷ್ಟು ಬುಟ್ಟಿಗೆ ಹಾಕುತ್ತ ಕೊರವಿ ತಾನು ಬಿಟ್ಟದನ್ನು ಉಣ್ಣುವವರನ್ನು ತನ್ನ ಪರಿವಾರವನ್ನು ವಿವರಿಸುತ್ತಾಳೆ. ಊಟವಾದ ಮೇಲೆ ಕೊರವಂಜಿಯ ಬಯಕೆಯಂತೆ ಅವಳು ಬೇಡಿದ ವಸ್ತುಗಳನ್ನೆಲ್ಲ ಸತ್ಯಭಾಮೆ ಕೊಡುತ್ತಾಳೆ. ಆಗ ಕೊರವಿಯ ಈ ರೀತಿ ಹೇಳುತ್ತಾಳೆ.

ಹೊಟ್ಟೆಯೊಳಗೆ ಸೃಷ್ಟಿ ತುಂಬಿ ತಿಟ್ಟವಾಗಿದೆ
ಬೆಟ್ಟ ನುಂಗುವಾಕಿಗಿನ್ನು ರೊಟ್ಟಿಯಾನ್ಸುದೇ
ಭಕ್ತಿಯಲ್ಲಿ ನೀಡೆ ಅಲ್ಲಿ ತೃಪ್ತಿಗೈವನೇ
ಭಕ್ತಿ ಹೀನರಲ್ಲಿ ಬಂದು ತುತ್ತುಗೊಳ್ಳೆನೆ ।

ಪರಮಾತ್ಮನಾದ ತಾನು ಭಕ್ತಿಯಿಂದ ಮಾತ್ರ ಉಟಾ ಬಡಿಸಿದರೆ ತೃಪ್ತನಾಗುತ್ತಾನೆ. ಅಹಂಭಾವ,

ಅಹಂಕಾರ, ಗರ್ವದಿಂದ ಮಾಡುವ ಕ್ರೀಯೆಯಲ್ಲಿ ನಾನು ತೃಪ್ತನಲ್ಲ. ಭಕ್ತಿಯ ನನ್ನ ಸರ್ವಸ್ವ ಎಂದು ಕೊರವಿ ಆಡುವ ಮಾತುಗಳು ಕೇಳಿ ಕೊನೆಯದಾಗಿ ಭಾಮೆಗೆ ಭಾಷೆಯನ್ನು ಕೊಟ್ಟು ಹೋಗುವಾಗ ಸತ್ಯವಾಗಿ ಕೇಳು ಸತ್ಯಭಾಮೆ ನಿನ್ನ ಪ್ರಭೂ ದಿವಿಜರೊಂದಿಗೆ ಬಹುಬೇಗನೆ ನಿನ್ನಲ್ಲಿಗೆ ಬರುತ್ತಾನೆ. ನಿನ್ನ ರೊಟ್ಟಿ ತುಪ್ಪದಲ್ಲಿ ಬಿತ್ತು ಈ ಮಾತು ನಿನ್ನ ಶರಗಿನಲ್ಲಿ ಗಂಟುಕಟ್ಟಿಕೊಳ್ಳು ನಾನು ಬೇಗನೇ ಹೋಗಬೇಕಾಕಿದೆ ನನ್ನನಿಗ ಬೇಗ ಕಳುಹಿಸು ದುಂಡೀ ಎಂದಾಗ ಸತ್ಯಭಾಮೆ ಕೊರವಿಯನ್ನು ತನ್ನ ಅರಮನೆಯಿಂದ ಕಳಿಸಿಕೊಡುವ ದೃಶ್ಯ :-

**ರಾಗ – ಶಂಕರಾಭರಣ** **ತಾಳ – ಆದಿ**

ನಡೆದಾಳು ಕೊರವಂಜಿ ಬಡನಡು ಬಳಕುತ್ತಾ ಮುಡಿಯನಲ್ಲಾಡುತ
ಬಿಡಿಹೂವು ಉದರುತ್ತಾ ಕಡೆಗಣ್ಣ ನೋಟದಲಿ ನಡೆದಾಳು... ॥ ಪಲ್ಲ ॥
ಮುತ್ತು ಮಾಣಿಕ ರತ್ನ ತೆತ್ತಿಸಿದ ಪುಟ್ಟನೆತ್ತಿಯ ಮ್ಯಾಲಿಟ್ಟು
ಸುತ್ತ ಮುತ್ತು ನೋಡುತಾ ಮತ್ತ ವಾರಣದಂತೆ ನಡೆದಾಳು...

ಕಡಗ ಕಂಕಣ ಚೂಡೆ ನಡುವಿನೊಡ್ಯಾಣವು ಕಡುರವ ತನ್ನಯ
ನುಡೆ ವೀಣೆಯ ಸ್ವರಾ, ಒಡಗೊಡಾವಾ ಬಗೆಯು ನಡೆದಾಳು...

ಅಡಿಗಡಿಗೆ ತನ್ನ ಎಡದ ಸಿಂಗನ ಮೈಯಾ ದಡವಿ ಮುದ್ದಿಸಿ, ಬಹಳ
ತಡವಾಯಿತೆಂದು ಮಡದಿ ರುಕ್ಮೀಣಿ ಮನೆಗೆ ನಡೆದಾಳು...

ಸತ್ಯಭಾಮೆಯ ಮನೆಯಿಂದ ರುಕ್ಮೀಣಿಯಲ್ಲಿಗೆ ಬಂದ ಶ್ರೀಕೃಷ್ಣ ಸತ್ಯಭಾಮೆಯು ತನ್ನ ಅಂತಃಪುರದಲ್ಲಿ ಪಡುವ ವಿರಹವೇದನೆಯನ್ನು ರುಕ್ಮೀಣಿಗೆ ವಿವರಿಸಿ, ತಾನು ಸತ್ಯಭಾಮೆಯ ಅರಮನೆಗೆ ಹೋಗಿ ಬರುವುದಾಗಿ ಹೇಳುತ್ತಾನೆ.

ಅದರಂತೆ, ಶ್ರೀಕೃಷ್ಣ ಸತ್ಯಭಾಮೆಯ ಮೆನಗೆ ಬರುತ್ತಾನೆ ಬಾಗಿಲು ತಟ್ಟುತ್ತಾನೆ. ಯಾರು ಬಂದವರು ನೀವು ನಿಮ್ಮ ಪರಿಚಯ ಹೇಳಿ ಎಂದು ಸತ್ಯಭಾಮೆ ಹೇಳುತ್ತಾಳೆ. ಅವಳನ್ನು ತನ್ನ ಅವತಾರದ ನೆನಪು ಮಾಡಿಕೊಡುತ್ತಾನೆ. ಮೊದಲಿಗೆ ಮತ್ಸ್ಯಾವತಾರದ ಬಗೆ ಹೇಳುತ್ತಾನೆ. ಮತ್ಸ್ಯಾವತಾರ ವಿದ್ದರೆ ಒಳ್ಳೆದು ಅಲ್ಲಿಯ ಸಮುದ್ರದಲ್ಲಿಯ ಇರುಹೋಗಯ್ಯಾ ಹೋಗು ಎಂದು ನುಡಿಯುತ್ತಾಳೆ. ಅನಂತರ ಶ್ರೀಕೃಷ್ಣ ಕೂರ್ಮಾವತಾರದ ನೆನಪು ಮಾಡುತ್ತಾನೆ. ಕೂರ್ಮವಾದರೆ ಒಳ್ಳೆಯದು ದೊಡ್ಡ ಗುಡ್ಡವನ್ನು ಹೊತ್ತುಕೊಂಡು ಸಮ್ಮನಾಗಿರು ಎನ್ನುತ್ತಾಳೆ. ಆಗ ಶ್ರೀಕೃಷ್ಣನು ವರಹ ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲಿ, ಎಲ್ಲಾ ದಶಾವತಾರಗಳ ಹೆಸರು ಹೇಳಿ ಪರಚಯಿಸಿದಾಗ ಸತ್ಯಭಾಮೆ ಬಾಗಿಲು ತೆರೆಯಲೇ ಇಲ್ಲ. ಆಕೆಯು ಪ್ರತಿಯೊಂದು ಅವತಾರ ಹೇಳಿದರು ಅಣುಕಿಸಿ ಮಾತನಾಡಿದ ಸತ್ಯಭಾಮೆ ಅನಂತರ ಶ್ರೀಕೃಷ್ಣ ಕೋಪಿಸಿಕೊಂಡು ಹೊರಟು ಹೋಗುತ್ತಾನೆ. ಆಗ ಸತ್ಯಭಾಮೆ ಬಾಗಿಲು ತೆರೆದು ನೋಡುತ್ತಾಳೆ. ಅಲ್ಲಿ ಶ್ರೀಕೃಷ್ಣ ಕಾಣುವುದಿಲ್ಲ.

ಆಗ ತನ್ನ ತಪ್ಪಿನ ಅರಿವು ಬಂಧು, ಧೂತಿಯನ್ನು ಕರೆದುಕೊಂಡು ಸತ್ಯಭಾಮೆ ಶ್ರೀಕೃಷ್ಣ ಪರಮಾತ್ಮನಲ್ಲಿಗೆ ಬರುತ್ತಾಳೆ.

**ಪದ – ಆದಿತಾಳ** **ರಾಗ – ಬೈರವಿ**

ಯಾತಕೆನ್ನನು ಪೀಡಿಸುವೆ ನೀ ಬಾರೊ–ರಂಗಾ
ಪ್ರೀತಿಯಿಂದ ಕರೆವೆ ಮನೆಗೆ
ಸೋತುಬಂದವಳಿಗೆ ಸುಧೆಯುಣಿಸಬಾರೋ । ..........

ನನ್ನ ಸ್ವಾಮಿ ನಾ ಮಾಡಿದ ತಪ್ಪನ್ನು ಕ್ಷಮಿಸಿರಿ. ದಯಮಾಡಿ ಮಂದಿರಕ್ಕೆ ಹೋಗುಣು ನಡಿರಿ. ಎಂದಾಗ ಶ್ರೀಕೃಷ್ಣನು ಸತ್ಯಭಾಮೆಯಲ್ಲಿದ್ದ ಅಹಂಕಾರ ನಾಶಹೊಂದಿದೆಯೆಂದು ತನಗೆ ಸಂಪೂರ್ಣ ಮನವರಿಕೆ ಆದ ಮೇಲೆ ಶ್ರೀಕೃಷ್ಣ ಅವಳನ್ನು ಕ್ಷಮಿಸಿಸುತ್ತಾನೆ. ಈಗ ತನ್ನ ಕೊರಳಲ್ಲಿರುವ ಹಾರವನ್ನು ತೋರಿಸಿ ಹಿಂದೆ ಸತ್ಯಭಾಮೆಯ ಹತ್ತಿರ ಕೊಟ್ಟಿದ್ದ ಹಾರವನ್ನು ಹೇಗಾದರೂ ಸರಿ ಒಯ್ದೇ ತೀರುವುದಾಗಿ ಮಾಡಿದ್ದ, ಭಾಷೆಯನ್ನು ಕೊರವಂಜಿಯ ವೇಷಧರಿಸಿ ಅದನ್ನು ಪೂರೈಸಿದುದಾಗಿ ಹೇಳುತ್ತಾನೆ. ನನ್ನ ಪಣ ನನಗೆ ಮುಟ್ಟಿತು, ಸತ್ಯಭಾಮೆಯ ಪಣ ಸತ್ಯಭಾಮೆಗೆ ಮುಟ್ಟಿತು. ನಿನ್ನ ಶಪಥ ನಮ್ಮಿಬ್ಬರನ್ನು ಒಂದು ಮಾಡಿತು ಎಂದು ಶ್ರೀಕೃಷ್ಣ ಸತ್ಯಭಾಮೆಯರು ಸಮಾಗಮದೊಂದಿಗೆ ಶ್ರೀಕೃಷ್ಣ ಪಾರಿಜಾತ ಮಂಗಲವಾಗುತ್ತದೆ.

ಒಟ್ಟಾರೆಯಾಗಿ ಕೊರವಂಜಿಯ ಪಾತ್ರ ಸೃಷ್ಟಿಯ ಮುಖ್ಯವಾದ ಉದ್ದೇಶವೆಂದರೆ ಸತ್ಯಭಾಮೆ ಕೈಕೊಂಡ ಶಕ್ತಿ ಪೂಜೆಯ ಪರಿಣಾಮದಿಂದ ಶ್ರೀಕೃಷ್ಣನ ಮನಸ್ಸು ಕರಗುವುದರೊಂದಿಗೆ 'ಕೊರವಂಜಿ' ಪ್ರವೇಶ ಆರಂಭವಾಗುತ್ತದೆ. ಆಗ ಶ್ರೀಕೃಷ್ಣನ ಮನಸ್ಸಿನಲ್ಲಿ ಯಾಕೋ ವ್ಯಥೆ ಎನಿಸಿತೊಡಗುತ್ತದೆ. ಆಗ ಸತ್ಯಭಾಮೆಗೆ ಅನ್ಯಾಯವಾಯಿತೆಂದು ಎನ್ನ ಕಾಯ ತಲ್ಲಿಣಿಸುತ್ತದೆ. ಅವಳಲ್ಲಿ ಒಂದಾಗಬೇಕೆಂಬ ಹಂಬಲ ಹೆಚ್ಚಾಗುತ್ತದೆ. ಇದಕ್ಕೆ ಕಾರಣವೇನು ತಿಳಿಯದು. ನಾನಿನ್ನ ಅವಳನ್ನು ಕಾಣದೆ ಇರಲಾರೆ ಎಂದು ವಿರಹವೇಧನೆಯಿಂದ ಬಳಲಿ ಹೇಗಾದರು ಮಾಡಿ ಸತ್ಯಭಾಮೆಯಲ್ಲಿ ಸೇರಬೇಕು. ಯಾವ ವೇಷದಲ್ಲಿ ಅವಳಲ್ಲಿ ಹೋಗಲಿ ಎಂದು ಭಾಗವತನೊಂದಿಗೆ ಚರ್ಚಿಸಿ, ಕೊನೆಗೆ 'ಕೊರವಂಜಿ' ರೂಪಧರಿಸಿ, ಕೊರವಂಜಿಯ ಅಲಂಕಾರ ಮಾಡಿಕೊಂಡು ಸೃಷ್ಟಿ ಎಂಬ ಕಂದನನ್ನು ಬಗಲಲ್ಲಿ ಎತ್ತಿಕೊಂಡು ಜೋಗುಳ ಹಾಡುತ್ತ ಬರುತ್ತಾನೆ. ಆನಂತರ ಸತ್ಯಭಾಮೆ ಕೊರವಂಜಿಯನ್ನು ಬರಮಾಡಿಕೊಂಡು ಶ್ರೀಕೃಷ್ಣ ಇರುವಿಕೆ ಮತ್ತು ಬರುವಿಕೆಯ ವಿಷಯ ವಿಚಾರಿಸಿದಾಗ ಕೊರವಂಜಿಯ ತನ್ನಲ್ಲಿಯ ಬ್ರಹ್ಮಾಂಡ ಜ್ಞಾನವನ್ನು ವಿವರಿಸುವ ರೀತಿಯನ್ನು ನೋಡಿದರೆ ಅವಳಂತ ಕೊರವಂಜಿ ಜನ ಸಾಮಾನ್ಯರಲ್ಲಿ ಇರುವಳೆ ಎಂಬ ಭಾವನೆ ಮೂಡದೆ ಇರದು. ಇಷ್ಟೆಲ್ಲ ಮಾತ ನಾಡುವ ಕೊರವಂಜಿ ಕೃಷ್ಣನಲ್ಲದೆ ಬೇರೆ ರೀತಿಯ ಪಾತ್ರ ಇಲ್ಲಿ ಕಂಡು ಬರುವುದಿಲ್ಲ. ಕೊರವಂಜಿಯನ್ನು ಸತ್ಯಭಾಮೆ ಸತ್ಕರಿಸುವ ರೀತಿ ನೋಡಿದರೆ ಜನ ಸಾಮಾನ್ಯತೆಯಿಂದ ಭಿನ್ನವಾಗಿ ಕಂಡು ಬರುತ್ತದೆ. ಅಲ್ಲದೆ ಜನಪದರು ಕಾಣುವ ಅಲೌಕಿಕವಾದ ಭಾವದ ಪ್ರತಿಬಿಂಬವೇ 'ಕೊರವಂಜಿ' ಆಗಿದ್ದಾಳೆ.

ಆಗ ತನ್ನ ತಪ್ಪಿನ ಅರಿವು ಬಂಧು, ಧೂತಿಯನ್ನು ಕರೆದುಕೊಂಡು ಸತ್ಯಭಾಮೆ ಶ್ರೀಕೃಷ್ಣ ಪರಮಾತ್ಮನಲ್ಲಿಗೆ ಬರುತ್ತಾಳೆ.

**ಪದ – ಆದಿತಾಳ** **ರಾಗ – ಬೈರವಿ**

ಯಾತಕೆನ್ನನು ಪೀಡಿಸುವೆ ನೀ ಬಾರೊ–ರಂಗಾ

ಪ್ರೀತಿಯಿಂದ ಕರೆವೆ ಮನೆಗೆ

ಸೋತುಬಂದವಳಿಗೆ ಸುಧೆಯುಣಿಸಬಾರೋ । .........

ನನ್ನ ಸ್ವಾಮಿ ನಾ ಮಾಡಿದ ತಪ್ಪನ್ನು ಕ್ಷಮಿಸಿರಿ. ದಯಮಾಡಿ ಮಂದಿರಕ್ಕೆ ಹೋಗುಣು ನಡಿರಿ. ಎಂದಾಗ ಶ್ರೀಕೃಷ್ಣನು ಸತ್ಯಭಾಮೆಯಲ್ಲಿದ್ದ ಅಹಂಕಾರ ನಾಶಹೊಂದಿದೆಯೆಂದು ತನಗೆ ಸಂಪೂರ್ಣ ಮನವರಿಕೆ ಆದ ಮೇಲೆ ಶ್ರೀಕೃಷ್ಣ ಅವಳನ್ನು ಕ್ಷಮಿಸಿಸುತ್ತಾನೆ. ಈಗ ತನ್ನ ಕೊರಳಲ್ಲಿರುವ ಹಾರವನ್ನು ತೋರಿಸಿ ಹಿಂದೆ ಸತ್ಯಭಾಮೆಯ ಹತ್ತಿರ ಕೊಟ್ಟಿದ್ದ ಹಾರವನ್ನು ಹೇಗಾದರೂ ಸರಿ ಒಯ್ದೇ ತೀರುವುದಾಗಿ ಮಾಡಿದ್ದ, ಭಾಷೆಯನ್ನು ಕೊರವಂಜಿಯ ವೇಷಧರಿಸಿ ಅದನ್ನು ಪೂರೈಸಿದುದಾಗಿ ಹೇಳುತ್ತಾನೆ. ನನ್ನ ಪಣ ನನಗೆ ಮುಟ್ಟಿತು, ಸತ್ಯಭಾಮೆಯ ಪಣ ಸತ್ಯಭಾಮೆಗೆ ಮುಟ್ಟಿತು. ನಿನ್ನ ಶಪಥ ನಮ್ಮಿಬ್ಬರನ್ನು ಒಂದು ಮಾಡಿತು ಎಂದು ಶ್ರೀಕೃಷ್ಣ ಸತ್ಯಭಾಮೆಯರು ಸಮಾಗಮದೊಂದಿಗೆ ಶ್ರೀಕೃಷ್ಣ ಪಾರಿಜಾತ ಮಂಗಲವಾಗುತ್ತದೆ.

ಒಟ್ಟಾರೆಯಾಗಿ ಕೊರವಂಜಿಯ ಪಾತ್ರ ಸೃಷ್ಟಿಯ ಮುಖ್ಯವಾದ ಉದ್ದೇಶವೆಂದರೆ ಸತ್ಯಭಾಮೆ ಕೈಕೊಂಡ ಶಕ್ತಿ ಪೂಜೆಯ ಪರಿಣಾಮದಿಂದ ಶ್ರೀಕೃಷ್ಣನ ಮನಸ್ಸು ಕರಗುವುದರೊಂದಿಗೆ 'ಕೊರವಂಜಿ' ಪ್ರವೇಶ ಆರಂಭವಾಗುತ್ತದೆ. ಆಗ ಶ್ರೀಕೃಷ್ಣನ ಮನಸ್ಸಿನಲ್ಲಿ ಯಾಕೋ ವ್ಯಥೆ ಎನಿಸಿತೊಡಗುತ್ತದೆ. ಆಗ ಸತ್ಯಭಾಮೆಗೆ ಅನ್ಯಾಯವಾಯಿತೆಂದು ಎನ್ನ ಕಾಯ ತಲ್ಲಿಣಿಸುತ್ತದೆ. ಅವಳಲ್ಲಿ ಒಂದಾಗಬೇಕೆಂಬ ಹಂಬಲ ಹೆಚ್ಚಾಗುತ್ತದೆ. ಇದಕ್ಕೆ ಕಾರಣವೇನು ತಿಳಿಯದು. ನಾನಿನ್ನ ಅವಳನ್ನು ಕಾಣದೆ ಇರಲಾರೆ ಎಂದು ವಿರಹವೇಧನೆಯಿಂದ ಬಳಲಿ ಹೇಗಾದರು ಮಾಡಿ ಸತ್ಯಭಾಮೆಯಲ್ಲಿ ಸೇರಬೇಕು. ಯಾವ ವೇಷದಲ್ಲಿ ಅವಳಲ್ಲಿ ಹೋಗಲಿ ಎಂದು ಭಾಗವತನೊಂದಿಗೆ ಚರ್ಚಿಸಿ, ಕೊನೆಗೆ 'ಕೊರವಂಜಿ' ರೂಪಧರಿಸಿ, ಕೊರವಂಜಿಯ ಅಲಂಕಾರ ಮಾಡಿಕೊಂಡು ಸೃಷ್ಟಿ ಎಂಬ ಕಂದನನ್ನು ಬಗಲಲ್ಲಿ ಎತ್ತಿಕೊಂಡು ಜೋಗುಳ ಹಾಡುತ್ತ ಬರುತ್ತಾನೆ. ಅನಂತರ ಸತ್ಯಭಾಮೆ ಕೊರವಂಜಿಯನ್ನು ಬರಮಾಡಿಕೊಂಡು ಶ್ರೀಕೃಷ್ಣ ಇರುವಿಕೆ ಮತ್ತು ಬರುವಿಕೆಯ ವಿಷಯ ವಿಚಾರಿಸಿದಾಗ ಕೊರವಂಜಿಯ ತನ್ನಲ್ಲಿಯ ಬ್ರಹ್ಮಾಂಡ ಜ್ಞಾನವನ್ನು ವಿವರಿಸುವ ರೀತಿಯನ್ನು ನೋಡಿದರೆ ಅವಳಂತ ಕೊರವಂಜಿ ಜನ ಸಾಮಾನ್ಯರಲ್ಲಿ ಇರುವಳೆ ಎಂಬ ಭಾವನೆ ಮೂಡದೆ ಇರದು. ಇಷ್ಟೆಲ್ಲ ಮಾತ ನಾಡುವ ಕೊರವಂಜಿ ಕೃಷ್ಣನಲ್ಲದೆ ಬೇರೆ ರೀತಿಯ ಪಾತ್ರ ಇಲ್ಲಿ ಕಂಡು ಬರುವುದಿಲ್ಲ. ಕೊರವಂಜಿಯನ್ನು ಸತ್ಯಭಾಮೆ ಸತ್ಕರಿಸುವ ರೀತಿ ನೋಡಿದರೆ ಜನ ಸಾಮಾನ್ಯತೆಯಿಂದ ಭಿನ್ನವಾಗಿ ಕಂಡು ಬರುತ್ತದೆ. ಅಲ್ಲದೆ ಜನಪದರು ಕಾಣುವ ಅಲೌಕಿಕವಾದ ಭಾವದ ಪ್ರತಿಬಿಂಬವೇ 'ಕೊರವಂಜಿ' ಆಗಿದ್ದಾಳೆ.

ಅಧ್ಯಾಯ - ೫

# ಅಟ್ಟ ಹಾಗೂ ವೇಷಭೂಷಣ ಹಾಗೂ ಸಂಗೀತ ಸಂಭಾಷಣೆ

## ಅಧ್ಯಾಯ - ೫

# ಅಟ್ಟ ಹಾಗೂ ವೇಷಭೂಷಣ ಹಾಗೂ ನೃತ್ಯ ಸಂಭಾಷಣೆ

ಅಟ್ಟದ ಜಾಗವನ್ನು ಊರಿನ ನಾಲ್ಕು ಜನ ಹಿರಿಯರು ಕೂಡಿಕೊಂಡು ತಮ್ಮೂರಿನ ಬಯಲು ಜಾಗದಲ್ಲಿ ಅಥವಾ ದೇವಾಲಯದ ಆವರಣದಲ್ಲಿ ಹೆಚ್ಚು ಜನ ಸೇರಲು ಯೋಗ್ಯವಿರುವ ಮತ್ತು ಸುರಕ್ಷಿತವದ ಸ್ಥಳದಲ್ಲಿ ಅಟ್ಟ ಹಾಕುತ್ತಾರೆ. ಜಾತ್ರೆಯ ಅಂಗವಾಗಿ ಆಡುವ ಬಯಲಾಟಗಳು ಸಾಮಾನ್ಯವಾಗಿ ಜಾತ್ರೆ ನಡೆಯುವ ಆವರಣದಲ್ಲಿಯೇ ನಡೆಯುತ್ತವೆ. ಇನ್ನು ಕೆಲವು ಊರುಗಳಲ್ಲಿ ಅಟ್ಟ ಹಾಕಲು ಖಾಯಂ ಆದ ಚಚ್ಚೌಕಾಕಾರದ ಕಟ್ಟೆಗಳು ಕಟ್ಟಿರುತ್ತಾರೆ. ಇಲ್ಲಿ ಇಂಥ ಕಡೆಗೆ ಮುಖಮಾಡಿಕೊಂಡಿರಬೇಕೆಂಬ ನಿಯಮವಿರುವುದಿಲ್ಲ. ಅದೇ ರೀತಿಯಾಗಿ ದೇವಾಲಯದ ಆವರಣದಲ್ಲಿಯ ಕೂಡಾ ದೇವರ ಕಡೆಗೆಯೇ ಮುಖ ಮಾಡಿಕೊಂಡರಬೇಕೆಂಬ ನಿಯ ಇರುವುದಿಲ್ಲ. ಆದರೆ ರಾಹೂ ಬೆನ್ನ ಮಾಡಿಕೊಂಡು ಅಟ್ಟ ಹಾಕುತ್ತಾರೆ. ಆಟ ಆಡುವ ಮೊದಲನೆ ದಿವಸವೇ ಅಟ್ಟದ ಸಿದ್ಧತೆ ಮಾಡಲು ಪ್ರಾರಂಭಮಾಡುತ್ತಾರೆ. ಇಲ್ಲವೇ ಅಂದಿನ ಆಟ ಆಡುವ ದಿನವೇ ಅಟ್ಟಕ್ಕೆ ಬೇಕಾಗುವ ಚಕ್ಕಡಿ ಬಂಡಿಗಳ ನಾಲ್ಕುಚಕ್ರಗಳು ತಂದು ಅವುಗಳಲ್ಲಿ ಎರಡು ಚಕ್ರಗಳ ಸಮಾಂತರವಾಗಿ ೧೫೧/೨ ಅಡಿ ಅಂತರದಲ್ಲಿ ಹೂತು ಈ ಎರಡು ಚಕ್ರಗಳ ಹಿಂದೆ ೧೫೧/೨ ಅಡಿಯಂತೆ ಇನ್ನೆರಡು ಚಕ್ರಗಳು ಅರ್ಧದಷ್ಟು ಹೂಳುತ್ತಾರೆ. ಅನಂತರ ಎದುರಿನ ಎರಡು ಚಕ್ರಗಳ ಹಲ್ಲುಗಳ ಮೇಲೆ ಗಟ್ಟಿಯಾದ ಬಿದರಿನ ಬಂಬು ಅಥವಾ ಉದ್ದವಾದ ಗಳಗಳು ಹಿಂದಿನ ಚಕ್ರದ ಮೇಲೆಯು ಉದ್ದ ಉದ್ದನೆಯ ಕಟ್ಟಿಗೆಗಳು ಅಡ್ಡ ಕಟ್ಟಿರುತ್ತಾರೆ.



ಶ್ರೀಕೃಷ್ಣ ಪಾರಿಜಾತದ ರಂಗಸ್ಥಳ

ಅನಂತರ ಚಕ್ರದ ನಾಲ್ಕು ಬದಿಯಲ್ಲಿ ನೆಟ್ಟಗೆ ಬಂಬುಕಟ್ಟಿ ಅಥವಾ ನಿಲ್ಲಿಸಿ ಮೇಲೆಯು ಉದ್ದ ಉದ್ದನೆ ಕಟ್ಟಿಗೆ ಚೌಕಾಕಾರದಲ್ಲಿ ಕಟ್ಟಿ, ಅದರ ಮೇಲೆ ಗುಡಾರ ಅಥವಾ ತಾಡಪತ್ರೆ ಹಾಕಿ ಆಟದ ಮುಂದಿನ ಭಾಗಕ್ಕೆ ಮಾವಿನ ಎಲೆಗಳ ತೋರಣವನ್ನು ಕಟ್ಟಿ, ಮಗ್ಗಲು ಕಂಬಗಳಿಗೆ ಜೋಳದ ದಂಟುಕಟ್ಟಿ, ತೆಂಗಿನಗರಿ, ಹೂಮಾಲೆ ಸರ ಕಟ್ಟಿ ಶೃಂಗರಿಸುತ್ತಾರೆ. ಇಷ್ಟಾದರೆ ಆಟದ ಮಂಟಪ ತಯಾರಾಗುತ್ತದೆ.

ಅಟ್ಟದ ಅರ್ಧಭಾಗವನ್ನು ಮತ್ತು ಎದುರಿನ ಪ್ರದರ್ಶನ ಭಾಗವನ್ನು ಬಿಟ್ಟು ಮೂರು ಕಡೆ ಗುಡಾರ ಹಾಕಿ, ಬಯಲಾಟದಲ್ಲಿಯ ಪಾತ್ರಧಾರಿಗಳು ಮತ್ತು ಹಿಮ್ಮೇಳದವರು ಜನರಿಗೆ (ಪ್ರೇಕ್ಷಕರಿಗೆ) ಕಾಣುವಂತೆ ರಂಗಮಂಟಪ ತಯಾರು ಮಾಡುತ್ತಾರೆ. ಈ ಪಾರಿಜಾತದಲ್ಲಿ ವಿಶೇಷವಾದ ಬೇರೆ ಬೇರೆ ಸನ್ನಿವೇಶಕ್ಕೆ ತಕ್ಕಂತೆ ಪರದೆಗಳು ಇರುವುದಿಲ್ಲ. ಶ್ರೀಕೃಷ್ಣನ ಪಾತ್ರ, ಸತ್ಯಭಾಮೆಯ ಪಾತ್ರೆಗಳು ಅಟ್ಟದ ಮೇಲೆ ನೇರವಾಗಿ ಜನರಿಗೆ ಕಾಣಬಾರದೆಂದು ಕಾರಣದಿಂದ ಶಾಲು ಅಥವಾ ಧೋತರವನ್ನು ಇಬ್ಬರು ಅಡ್ಡ ಹಿಡಿಯುತ್ತಾರೆ. ಪಾತ್ರಧಾರಿಗಳು ಕುಣಿಯುತ್ತ ಹಾಡಲು ಪ್ರಾರಂಭಿಸಿದಾಗ ಹಿಡಿದ ಪರದೇ ತೆಗೆದು ಬಿಡುತ್ತಾರೆ.

ಪ್ರೇಕ್ಷಕ ವರ್ಗವು ಅಟ್ಟದಿಂದ ೧೦ ರಿಂದ ೧೨ ಅಡಿಗಳಷ್ಟು ಅಂತರದಲ್ಲಿ ಕುಳಿತು ಆಟನೋಡುತ್ತಾರೆ. ಇನ್ನು ಕೆಲವರು ೨೦ ರಿಂದ ೪೦ ಅಡಿಗಳಷ್ಟು ಅಂತರದಲ್ಲಿ ಆಟಗಳನ್ನು ನೋಡುತ್ತಾರೆ. ಅಟ್ಟದ ಎರಡು ಮೂರು ದಿಕ್ಕಿನಿಂದ ಆಟನೋಡಬಹುದು. ಇದು ನಿಜಕ್ಕೂ ಬಯಲಿನಲ್ಲಿ ನಡೆಯುವ ಆಟವೆಂದೆ ಭಾಸವಾಗುತ್ತದೆ. ಶ್ರೀಕೃಷ್ಣ ಪಾರಿಜಾತದಲ್ಲಿ ಕೆಲವೇ ಕೆಲವು ಪಾತ್ರಗಳು ಇರುವುದರಿಂದ ಆಯಾ ಪಾತ್ರಗಳು ಬೇರೆ ಬೇರೆ ಪಾತ್ರಧಾರಿಗಳೆ ಅಭಿನಯಿಸುತ್ತಾರೆ. ಇನ್ನು ಕೆಲವು ಆಟದಲ್ಲಿ ಒಬ್ಬ ಪಾತ್ರಧಾರಿ ಬೇರೆ ಬೇರೆ ಸನ್ನಿವೇಶಕ್ಕೆ ತಕ್ಕಂತೆ ಬರುವ ಪಾತ್ರಗಳು ಕೂಡಾ ಅಭಿನಯಿಸುತ್ತಾನೆ. ಅದಕ್ಕಾಗಿ ವಿಶೇಷವಾಗಿ ಅಟ್ಟದ ಮೇಲೆಯ ವೇಷಭೂಷಣವನ್ನು ಬದಲಿಸಿಕೊಳ್ಳುತ್ತಾರೆ. ನೋಡುಗರಿಗೆ ವಿಶೇಷವಾದ ಆಸನಗಳಾಗಲಿ ಬೆಂಚ ಹಾಗೂ ಕುರ್ಚಿಗಳಾಗಲಿ ಇರುವುದಿಲ್ಲ. ಆದರೆ ಪ್ರೇಕ್ಷಕರು ತಾವು ಮನೆಯಿಂದ ತಂದಂತಹ ಹೊರಸು, ಚಾಪೇ, ಕೌದಿಗಳನ್ನು ಹಾಸಿ ಆಟವನ್ನು ನೋಡುತ್ತಾರೆ.

**ವೇಷಭೂಷಣ :**

ಶ್ರೀಕೃಷ್ಣ ಪಾರಿಜಾತದಲ್ಲಿ ವಿಶೇಷ ಭರ್ಜರಿ ವೇಷಭಾಷಣಗಳಿಲ್ಲದಿದ್ದರೂ ಕೂಡಾ ಕೆಲವೇ ಕೆಲವು ಪಾತ್ರಗಳು ಬಣ್ಣ, ಉಡುಗೆ, ತೊಡುಗೆ ಕೆಲವು ಶೃಂಗಾರದ ಆಭರಣಗಳನ್ನುಟ್ಟು ಕೊಳ್ಳುತ್ತಾರೆ. ಇಲ್ಲಿ ಬರುವ ಶ್ರೀಕೃಷ್ಣ, ರುಕ್ಮಿಣಿ, ಸತ್ಯಭಾಮೆ, ಕೊರವಂಜಿ, ನಾರದ ಈ ಪಾತ್ರಗಳು ಪ್ರೇಕ್ಷಕರಿಗೆ ಆ ಪಾತ್ರದ ಕಲ್ಪನೆ ಬರುವಂತೆ ವೇಷಭೂಷಣ ಮಾಡಿಕೊಂಡಿರುತ್ತಾರೆ. ಇನ್ನೂ ದೂತಿ, ಭಾಗವತ ಇವರು ಸಾಮಾನ್ಯ ಜನರಂತೆ ಉಡುಗೆ ತೊಡೆಗೆಯಲ್ಲಿ ಇದ್ದು ಪ್ರೇಕ್ಷಕ ವರ್ಗಕ್ಕೆ ಅಟ್ಟದ ಮೇಲೆ ಬರುವ ಪಾತ್ರಗಳ ಪರಿಚಯ ಹಾಡು, ಹಾಸ್ಯಭರಿತ ಮತ್ತು ಸಂದರ್ಭಚಿತ ಮಾತುಗಳು ಹೇಳಿ ಆಟಕ್ಕೆ

ಮೆರಗನ್ನು ತಂದು ಕೊಡುತ್ತಾರೆ. ಅದೇ ರೀತಿಯಾಗಿ ಶ್ರೀಕೃಷ್ಣ ಪಾರಿಜಾತದಲ್ಲಿ ರಾಗ ಪ್ರಧಾನ ಬಯಲಾಟವಾಗಿರುವುದರಿಂದ ಹಿಮ್ಮೇಳದಲ್ಲಿರುವ ಪೇಟಿವಾದಕ, ತಬಲಾವಾದಕ ಹಾಗೂ ಹಿನ್ನೇಲೆಗಾಯಕರು ಅಟ್ಟದ ಹಿಂದೆಯ ಇದ್ದು, ತಮ್ಮ ವಾದ್ಯಗಳು ನಾದಮಯವಾಗಿ ನುಡಿಸಿ, ಆಲಾಫ ಮಾಡಿ ಆಟ ನೋಡುವ ಜನರಿಗೆ ಸಂಗೀತ ಸುಧೆಯನ್ನು ಬಡಿಸುತ್ತಾರೆ.

**ಉಡುಗೆ ತೊಡುಗೆಗಳು :**

೧) ಶ್ರೀಕೃಷ್ಣನ ಪಾತ್ರಧಾರಿಯು ಧೋತ್ರ ಉಟ್ಟು ಮೈಮೇಲೆ ಆಕಾಶ ನೀಲಿ ಬಣ್ಣದ ಉದ್ದನೆ ಮತ್ತು ಅಗಲವಾದ ತೋಳುಗಳು (ಶರ್ಟ) ಅಂಗಿಯನ್ನು ತೊಟ್ಟಿರುತ್ತಾನೆ. ತಲೆಯ ಮೇಲೆ ಕಿರಿಟದಂತೆ ಕಾಣುವ ಹಳದಿ ಬಣ್ಣದ ರುಂಬಾಲು ತೊಟ್ಟು ರುಂಬಾಲದ ಮುಂದೆ ನವಿಲಿನ ಪಂಕ (ಗರಿ) ಕಟ್ಟಿ ಇದರ ಹಿಂದೆ ಜರತಾರಿ ಮಿಂಚಿನ ಹೂವಿರುತ್ತದೆ. ಕೊರಳಲ್ಲಿ ಕಂಠಿಸರ, ಮುತ್ತಿನಸರ, ಸ್ಪಟಿಕಸರ, ನೀಲ, ಹಸಿರು ಬಣ್ಣದ ಮಣಿಗಳ ಸರಗಳು ಕೊರಳಲ್ಲಿ ಹಾಕಿ ಹೂವಿನ ಮಾಲೆಯ ಧರಿಸಿರುತ್ತಾನೆ.

೨) ಸತ್ಯಭಾಮೆ ಹಾಗೂ ರುಕ್ಮೀಣಿ ಪಾತ್ರಗಳು (ಸ್ತ್ರೀ) ಪಾತ್ರ ಇರುವುದರಿಂದ ಮಡಿಸೀರೆ, ಇಲ್ಲವೆ ಪಿತಾಂಬರದಂತ ಜರತಾರಿ ಸೀರೆ ಉಟ್ಟು, ಅದಕ್ಕೆ ಹೋಲುವಂತಾ ಕುಬ್ಬಸ ತೊಟ್ಟು, ಕೈಗಳಿಗೆ ಹಸಿರು ಬಳೆಗಳು ತೊಟ್ಟು, ಬೆರಳಿಗೆ ಉಂಗರಹಾಕಿ, ಟೊಂಕಕ್ಕೆ ಡಾಬ (ಒಡ್ಯಾಣ) ಹಾಕಿಕೊಳ್ಳುತ್ತಾರೆ. ಕಾಲಲ್ಲಿ ಗೆಜ್ಜೆ ಕಟ್ಟಿರುತ್ತಾರೆ. ಹಣೆಯ ಮೇಲೆ ಕುಂಕುಂ ವೃತ್ತಾಕಾರ ಧರಿಸಿರುತ್ತಾರೆ. ಕಣ್ಣು ಹುಬ್ಬುಗಳಿಗೆ ಕಪ್ಪು ಬಣ್ಣದಿಂದ ತೀಡಿಕೊಂಡಿರುತ್ತಾರೆ. ತುಟಿಗಳಿಗೆ ಕೆಂಪು ಬಣ್ಣ ಸವರಿಕೊಂಡು, ಇಲ್ಲವೆ ಎಲೆ ಅಡಿಕೆ ತಿಂದು ಬಾಯಿ ಕೆಂಪಗೆ ಮಾಡಿಕೊಂಡಿರುತ್ತಾರೆ. ಕಿವಿಗಳಿಗೆ ಬೆಂಡೋಲೆ ಹಾಗೂ ಜುಮುಕಿ ಇಲ್ಲವೆ ಲೋಲಕ ಧರಿಸಿರುತ್ತಾರೆ. ಅಲ್ಲದೆ ಬುಗುಡಿ ಆಭರಣ ತೊಟ್ಟಿರುತ್ತಾರೆ. ಮುಗಿಗೆ ಮೂಗುತಿ ಇಲ್ಲವೆ ಸರ್ಜದ ನತ್ತು ತೊಟ್ಟುಕೊಂಡು, ಕೊರಳಲ್ಲಿ ವಜ್ಜಿ ಟಿಕ್ಕೆ, ಬೋರಮಾಳ, ಗುಂಡಿನ ಸರ್, ಶೃಂಗಾರಸರ ಎಲ್ಲ ತರಹದ ವಡವೆಗಳು ಹಾಕಿಕೊಂಡಿರುತ್ತಾರೆ. ತಲೆಯ ಕೂದಲು ಪುಗ್ಗೆ ಬರುವಂತೆ ಮೇಲೆರಿಸಿಕೊಂಡು ಮಧ್ಯ ಬೇತಲ ತೆಗೆದು ಬಾಚಿಕೊಂಡು ತುರುಬುಕಟ್ಟಿ, ತುರುಬಿನ ತುಂಬ ಮಲ್ಲಿಗೆ ಹೂವಿನ ಮಾಲೆ ಧರಿಸಿರುತ್ತಾರೆ. ಪಾತ್ರ ಅಭಿನಯ ಮಾಡುವಾಗ ಹೆಚ್ಚಾಗಿ ಸೆರಗು ಹೆಗಲ ಮೇಲಿಂದ ಜಾರಬಾರದೆಂದು ಹೆಗಲ ಕುಬ್ಬಸಕ್ಕೆ ಮತ್ತು ಸೀರೆಗೆ ಪಿನ್ನು ಹಾಕಿ, ಕುಣಿಯುವಾಗ ಟೊಂಕಕ್ಕೆ ಸೆರಗು ಸುತ್ತಿಕೊಂಡಿರುತ್ತಾರೆ. ಸಂಭಾಷಣೆ ಇದ್ದಾಗ ಸೆರಗು ಸಹಜವಾಗಿ ಇಳು ಬಿಟ್ಟಿರುತ್ತಾರೆ.

೩) ಕೊರವಂಜಿ ಪಾತ್ರದವಳು ಜರತಾರಿ ಸೀರೆ, ಕುಭಸ ತೊಟ್ಟಿಕೊಂಡು ಬಿಚ್ಚಿದ ಜಡೆಗೆ ಮಲ್ಲಿಗೆ, ಸಂಪಿಗೆ, ಗುಲಾಬಿ ಹೂ ಮಾಲೆ ಕಟ್ಟಿರುತ್ತಾರೆ.

ಪಾರಿಜಾತ ಅಭಿನಯದಲ್ಲಿ ಬರುವಂತೆಯ :

ಜಡೆಬಿಚ್ಚಿ ಸಂಪಿಗೆಣ್ಣೆ, ಹಚ್ಚಿ ನಲವಿನಲಿ
ಜಡಿಯುತಿರ್ಪವು ಝುಂಗೆವೆರಸಿ ಕೇಶಗಳು
ಒಡಮುರಿದಿಕ್ಕಿ ಓರಣದಿಂ ಗಲ್ಲಿಗಳಲ್ಲಿ
ಸುಳಿಕುಂತಾಳಿಗಳ ರಚಿಸಿದಳು ಕೊರವಂಜಿ
ಕುರುಳಗೂದಲು ತಿದ್ದಿ ಕಸ್ತೂರಿ ತಿಲಕವ
ಧರಿಸಿದಾಳು ಮೆರೆವ ಪಣೆಯಲ್ಲಿ ಅರ್ತಿಯಲಿ
ಹತ್ತು ಬೆರಳಿಗೆ ವಜ್ರಾಕೆತ್ತಿಸಿ ದುಂಗರಾ
ಗುತ್ತಾ ಪಟ್ಟಿಗೆ ಹಚ್ಚೆಮಣಿ ಎಣ್ಣೆನೂಲು
ಮತ್ತೆ ಮಾಯಾರಾಣಿ ಸುರೆ ಹೊನ್ನೆ ಪಾದಾಸರ
ಶಕ್ತಿ ಬಿರುದುಗಳಾ ಧರಿಸಿದಳೋ ಕೊರವಿ ।

ಇನ್ನು ಕೆಲವು ವಿಶೇಷ ಆಭರಣಗಳು ಕೊರವಿಯಲ್ಲಿ ನಾವು ಕಾಣುತ್ತೇವೆ.

ಶಂಕುಮಣಿ ತಾವರೇಮಣಿ, ಕರ್ಪೂರಮಣಿಯು
ಬಿಂಕದಾ ತುಳಸೀಮಣಿ ಶ್ರೀಗಂಧ ಮಣಿಯು
ಪೊಂಕಾದಿ ಸ್ಫಟಿಕದಾ ಮಣಿಗಳ್ಹಾರಗಳಾಬಿರು
ದಂಕಾ ಕೊರವಂಜಿ ಧರಿಸಿದಳೊ ಕೊರಳಿಗೆ ।

ಹೀಗೆ ವಿವಿಧ ಪ್ರಕಾರದ ಮಣಿಗಳು ಧರಿಸಿ ಇನ್ನು ಕೆಲವು ಆಭರಣಗಳು ಹೀಗವೆ.

ಗುಲಗಂಜಿ ಹಾರವ ಗುರುತಿಗ್ಹಾಕಿದಳು
ಹೊಳೆವ ಯಂತ್ರಗಳ ಮುಂದಲೆಗೆ ಕಟ್ಟಿದಳು
ಥಳಥಳಿಸುವ ಪಚ್ಚೆ ತುರಾಯವನಿಟ್ಟು
ಸುಳಿನಾಭಿಯಲ್ಲಿ ಕಟ್ಟಿದಳ್ಹೊನ್ನುಗಂಟೆ ।

ಈ ಎಲ್ಲ ದೃಷ್ಟಿಯಿಂದ ಶೃಂಗಾರಗೊಂಡ ಕೊರವಂಜಿ ಬಗಲಲ್ಲಿ ಕೂಸು (ಗೊಂಬೆ) ಟೊಂಕದಲ್ಲಿತ್ತುಕೊಂಡು ತಲೆಯ ಮೇಲೆ ಶಕುನ ಹೇಳುವ ಬುಟ್ಟಿ ಅದರಲ್ಲಿ ಎರಡು ಕೊಲುಗಳು ಇಟ್ಟುಕೊಂಡು ಅಟ್ಟದ ಮೇಲೆ ಬರುತ್ತಾಳೆ.

ಳ) ದೂತಿ – ಪಾತ್ರ ಸಂಭೋಧನೆಯಲ್ಲಿ ಹೆಣ್ಣು ಎಂದು ಹೇಳಿದರು. ಇಲ್ಲಿ ಗಂಡು ಮಗನೆ ಪಾತ್ರ ಮಾಡುತ್ತಾನೆ. ಈ ಬಯಲಾಟದಲ್ಲಿ ಒಂದು ದೃಷ್ಟಿಯಿಂದ ಇವನೇ ದೂತಿ ಪಾತ್ರವೇ ನಾಯಕ, ಪಾತ್ರ ಎಂದು ಕರೆದರು ತಪ್ಪಿಲ್ಲ. ಇವನು ಧೋತ್ರ, ಅಂಗಿ (ಖಮೀಜ್) ತೊಟ್ಟು ತಲೆಯ ಮೇಲೆ ರುಂಬಾಲು ಇಲ್ಲವೆ ಟೊಪ್ಪಿಗೆ ತೊಟ್ಟು ಸಾಧಾ ಸೀದಾ ರಸವತ್ತಾದ

ಮಾತಿನೊಂದಿಗೆ ನಸುನಗುತ್ತ ರಂಗದ ಮೇಲೆ ಆಟ ಮಂಗಲವಾಗುವರೆಗೂ ಇದ್ದು, ರಂಗದ ಮೇಲೆ ಬರುವ ಎಲ್ಲ ಪಾತ್ರಗಳ ಪರಿಚಯವನ್ನು ತಾನು ತಿಳಿದು, ಪ್ರೇಕ್ಷಕರಿಗೆ ತಿಳಿಹಾಸ್ಯದೊಂದಿಗೆ ತಿಳಿಸಿಕೊಡುತ್ತಾ ಕೈಯಲ್ಲಿ ತಾಳನ್ನು ಬಾರಿಸುತ್ತ, ಹಾಡಿಗೆ ಹಾಡು, ಮಾತಿಗೆ ಮಾತು ಕೊಡುತ್ತ ಇಡಿ ರಂಗಭೂಮಿಯನ್ನು ಉಲ್ಲಾಸಿತಗೊಳಿಸುತ್ತಾನೆ.




ಶ್ರೀಕೃಷ್ಣ ಪಾರಿಜಾತ ರಂಗಸ್ಥಳದ ಮೇಳ ಮತ್ತು ಪಾತ್ರಗಳ ವಿನ್ಯಾಸ

## ೧) ಸಂಗೀತ :

ಶ್ರೀಕೃಷ್ಣ ಪಾರಿಜಾತವು ಮೂಲತಃ ಸಂಗೀತ ಪ್ರಧಾನವಾದ ಮತ್ತು ಮಾರ್ಗಕ್ಕೆ ಹತ್ತಿರವಾದ ಸಂಗೀತ ಶೈಲಿಯಿಂದ ಕೂಡಿದೆ. ಇಲ್ಲಿ ಬರುವ ಪ್ರತಿಯೊಂದು ಹಾಡುಗಳು ಬಯಲಾಟ ನೋಡುಗರ ಮನ ಸೆರೆ ಹಿಡಿಯುವಂತಾಗಿದೆ.

ಅಪರಾಳ ತಮ್ಮಣ್ಣನು ಶ್ರೀಕೃಷಣ ಪಾರಿಜಾತವು ಹಾಡುವ ಪದ್ಯವೇ ಆಗಿದೆ. ಅದನ್ನು ಹಾಡುವ ಪರಂಪರೆ ಕರ್ನಾಟಕ ಸಂಗೀತ ಶೈಲಿಯಲ್ಲಿಯೇ ಹಾಡುತ್ತಾರೆ. ಅದನ್ನು ಹಾಡುವ ಪರಂಪರೆಯನ್ನು ಉಳಿಸಿಕೊಂಡು ಬಂದ ಉತ್ತರ ಕರ್ನಾಟಕದ ಗೃಹಣೀಯರು, ಕಲಾವಿಧರು ಸ್ವಲ್ಪ ಮಟ್ಟಿಗೆ ಕರ್ನಾಟಕ ಸಂಗೀತ ಕಲಿತವರೇ ಎಂದು ಹೇಳಬಹುದು. ಅಲ್ಲದೇ ಅನೇಕ ಮಹಿಳಾ ಕಲಾವಿಧರು ತಮ್ಮ ಸಂಗೀತ ಕಛೇರಿಗಳಲ್ಲಿ ಒಂದೊಂದು ಪಾರಿಜಾತದ ಹಾಡುಗಳನ್ನು ಹಾಡುತ್ತಿದ್ದರು. ತಮ್ಮ ಸಂಗೀತ ಕಛೇರಿಯಲ್ಲಿ ದೇಶಿಮಟ್ಟಗಳನ್ನು ಹಾಡುವುದಂತೂ ಅಸಾಧ್ಯ. "ಮಾರ್ಗಶೈಲಿಯ ಗಾಯನ ಮಾತ್ರ ಕಛೇರಿಯಲ್ಲಿ ನಡೆಯುವಂತದು. ಅಂದಮೇಲೆ ಪಾರಿಜಾತದ ಹಾಡುಗಳು ಮಾರ್ಗಶೈಲಿಯಲ್ಲಿ ದಕ್ಷಿಣಾದಿ ಶೈಲಿಯಲ್ಲಿ ಹಾಡಲ್ಪಡುತ್ತಿದ್ದುದು. ಸ್ಪಷ್ಟವಾಗಿ ತಿಳಿಯುತ್ತದೆ. ಅಲ್ಲದೇ ಸುಮಾರು ೧೯೦೦ ರವರೆಗೆ ಈ ಪ್ರದೇಶದಲ್ಲಿದ್ದವರು ಬರಿ ಕರ್ನಾಟಕ ಸಂಗೀತ ಮಾತ್ರ"[೧].

ಕನ್ನಡ ಕಾವ್ಯಗಳು ಹಾಡುವುದಕ್ಕಿಂತ ಓದುವ ಕ್ರಮವಿತ್ತೆಂದು ಹೇಳಿದರೆ ಸರಿಯೆನಿಸುತ್ತದೆ. ಅದೇ ಗಮಕ ಈ ಓದುವ ಕ್ರಮ ನಿಶ್ಚಿತ ರಾಗಗಳಲ್ಲಿ ಸಾಗುತ್ತಿತ್ತು. ಯಕ್ಷಗಾನ ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಕಾವ್ಯ ಕೃತಿಗಳನ್ನು ರಾಗ, ತಾಳಗಳ ಚೌಕಟ್ಟಿನಲ್ಲಿ ನಿರೂಪಿಸಿದ ರೀತಿಯನ್ನು ರೂಢಿಸಿಕೊಂಡರು. ಚೆನ್ನಪ್ಪ ಕವಿಯ ಶರಣಲೀಲಾಮೃತ, ಬಸವಪುರಾಣಗಳನ್ನು ಹಾಡುವ ಕ್ರಮ ಇಂಥದು. "ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಗುಣಲಕ್ಷಣಗಳಲ್ಲಿ ಶ್ರೇಷ್ಠ ಯಕ್ಷಗಾನ ಕೃತಿ. ಅದು ಹುಟ್ಟಿದ್ದು ಯಕ್ಷಗಾನ ಸಾಹಿತ್ಯದ ಸೃಷ್ಟಿ ಸಮೃದ್ಧಿವಾಗಿ ನಡೆದಾಗ ಕಥಾವಸ್ತು ಉದ್ದೇಶ, ಪ್ರೇರಣೆ ಇವೆಲ್ಲವೂ ಅಂದಿನ ಇತರ ಯಕ್ಷಗಾನ ಕೃತಿಗಳಿಗೂ ಶ್ರೀಕೃಷ್ಣ ಪಾರಿಜಾತಕ್ಕೂ ಸಮಾನವಾಗಿದೆ. ಆದ್ದರಿಂದ ಇದನ್ನು ಯಕ್ಷಗಾನ ಸಂಗೀತ ಶೈಲಿಯಲ್ಲಿಯೇ ಹಾಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ[೨]".

ಶ್ರೀಕೃಷ್ಣ ಪಾರಿಜಾತವು ರಂಗಭೂಮಿಗೆ ಬಂದು ಬಯಲಾಟವಾದಾಗ ಅದರ ಸಂಗೀತ ಶೈಲಿಯು ಕುತೂಹಲದ ಸಂಗತಿಯಾಗಿದೆ. ಹಾಡುಗಬ್ಬದ ಪರಿಚಿತ ಧಾಟಿಗಳು ಇದ್ದುದಿದ್ದಂತೆ ರಂಗಕ್ಕೆ ಬಂದಿರಬಹುದು. ಅಂದರೆ ಕುಲಗೋಡ ತಮ್ಮಣ್ಣ ಪಾರಿಜಾತ ಪ್ರಯೋಗದ ಸಂಗೀತ ಶೈಲಿ ಆರಂಭದಲ್ಲಿ ಯಕ್ಷಗಾನ ಸಂಗೀತ ಶೈಲಿಯಾಗಿತ್ತೆಂದು ಡಾ॥ ಶಿವರಾಮ ಕಾರಂತರು ಅಭಿಪ್ರಾಯ ಪಡುತ್ತಾರೆ[೩].

---

೧. ಉತ್ತರ ಕರ್ನಾಟಕದ ಬಯಲಾಟಗಳು : ಬಸವರಾಜ ಮಲಶೆಟ್ಟಿ : ಪುಟಸಂಖ್ಯೆ – ೧೭೦.
೨. ಉತ್ತರ ಕರ್ನಾಟಕದ ಬಯಲಾಟಗಳು : ಬಸವರಾಜ ಮಲಶೆಟ್ಟಿ : ಪುಟಸಂಖ್ಯೆ – ೧೭೦, ೧೭೧.
೩. ಯಕ್ಷಗಾನ ಬಯಲಾಟ : ಡಾ॥ ಶಿವರಾಮ ಕಾರಂತ : ಪುಟಸಂಖ್ಯೆ – ೬೩.

ಕೌಜಲಗಿ ನಿಂಗಮ್ಮನ ಕಂಪನಿಯಲ್ಲಿ ಅನೇಕ ಕಲಾವಿಧರು ಸುಪ್ರಸಿದ್ಧ ನಟ-ನಟಿಯರಾದ ಬರಗಿ ರಾಚಯ್ಯನವರು ಮತ್ತು ನಾವಲಗಟ್ಟಿ ಸಾಂವಕ್ಕಾ ಇವರೆಲ್ಲ ಕರ್ನಾಟಕ ಸಂಗೀತದಲ್ಲಿಯೇ ಹಾಡುತ್ತಿದ್ದರಲ್ಲದೇ ಹಿಂದೂಸ್ತಾನಿ ಸಂಗೀತದ ಪ್ರಭಾವ ಉತ್ತರ ಕರ್ನಾಟಕದ ಬಯಲಾಟದ ಮೇಲೆ ತನ್ನ ಛಾಪ ಮೂಡಿಸಿದೆ. ಏಕೆಂದರೆ ೧೯೨೦ ರಿಂದೀಚೆಗೆ ಉತ್ತರ ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತದ ಗಾಳಿ ಜೋರಿನಿಂದ ಬೀಸಿತು. ಅಲ್ಲಿಯವರೆಗೆ ತನ್ನ ಸ್ಥಾನವನ್ನು ಭದ್ರಮಾಡಿಕೊಂಡಿದ್ದು, ಕರ್ನಾಟಕ ಸಂಗೀತ ಜನರಿಂದ ದೂರಾಗತೊಡಗಿತು. ನಿಂಗಮ್ಮನ ಆಟದಲ್ಲಿ ಹಿಂದೂಸ್ತಾನಿ ಸಂಗೀತ ಕಲಿತ ಕೆಲವು ನಟರ ಪ್ರವೇಶದಿಂದಾಗಿ ಚಾರಿತ್ರಿಕ ಬದಲಾವಣೆಗೆ ಕಾರಣವಾಗಿದೆ.

ಹಿಂದೂಸ್ತಾನಿಯ ಪ್ರವೇಶ ಎಷ್ಟೇ ರಭಸದಿಂದಾಗಿದ್ದರೂ ಮೊದಲಿನ ಕರ್ನಾಟಕಿಯನ್ನು ಪೂರ್ತಿ ಅಳಿಸಿ ಹಾಕುವ ಸಾಮರ್ಥ್ಯ ಅದಕ್ಕೆ ಉಳಿಯಲಿಲ್ಲ. ಆದರೂ ಸಧ್ಯದ ಪಾರಿಜಾತ ಸಂಗೀತ ಅವೆರಡರ ಮಧುರ ಮಿಲನದ ರಸಪಾಕವಾಗಿದೆ. ಅದರಂತೆ ಕರ್ನಾಟಕ ಸಂಗೀತದ ರಾಗಗಳನ್ನು ಉಳಿಸಿಕೊಂಡು ಬಂದಿದ್ದರೂ ಅವುಗಳನ್ನು ಹಾಡುವ ರೀತಿ ಸಂಪೂರ್ಣವಾಗಿ ಹಿಂದೂಸ್ತಾನಿ. ಕರ್ನಾಟಕ ರಾಗ ಕನ್ನಿಕೆಗೆ ಹಿಂದೂಸ್ತಾನಿ ಅಲಂಕಾರ ಉದಾ _ ನಾಂಟಿ, ಝುಂಜೋಟಿ, ರೇಗುಪ್ತಿ, ಶ್ರೀರಾಗ, ಮಾಯಾಮಾಳವಗೌಳ, ಶಂಕರಾಭರಣ, ಮಾಂಡವಿ, ಕಾಂಭೋಜ ಮುಂತಾದ ರಾಗಗಳು ಕರ್ನಾಟಕಿ ಸಂಗೀತದಲ್ಲಿ ಆದರೆ ಅಭಿವ್ಯಕ್ತಿಗೊಳ್ಳುವ ರೀತಿ ಮಾತ್ರ ಹಿಂದೂಸ್ತಾನಿ. ಕೆಲವು ಸಮೂಹ ರಾಗಗಳು ಹಿಂದೂಸ್ತಾನಿ ಕಂಠಕ್ಕೆ ಸುಲಭವಾಗಿ ಬಗ್ಗಿ ಹೋದರು. ಕರ್ನಾಟಕಿಯ ಮೋಹನ, ತೋಡಿ, ಕಲ್ಯಾಣಿ ಹಾಡುವುದಾಗಿ ಹೇಳಿದರೂ. ಈ ರಾಗಗಳನ್ನೆ ಹೋಲುತ್ತೆ ಹಿಂದೂಸ್ತಾನಿಯ – ಭಾಷೆ, ಭೈರವಿ, ಯಮನ, ರಾಗಗಳು ಪಾರಿಜಾತದಲ್ಲಿ ಸಾಮಾನ್ಯವಾಗಿ ಹೀಗೆ ಗುರುತಿಸಬಹುದಾಗಿದೆ. ಪೀಲ, ಖಮಾಜ, ಅಭೋಗಿ, ಪೂರ್ವಿ, ದರ್ಬಾರಿಕಾನಡಾ, ಶುದ್ಧಸಾರಂಗ, ಆನಂದ ಭೈರವಿ, ಭೀಮಪಲಾಸ, ನೀಲಾಂಬರಿ ಇವೆಲ್ಲವುಗಳು ಹಿಂದೂಸ್ತಾನಿಯಿಂದ ಸಾಗಿ ಮುಂದೆ 'ಕರ್ನಾಟಕಿಯಲ್ಲಿ' ಮುಕ್ತಾಯ ಬಹಳ ಮನೋಹವಾಗಿ ಮುಗಿಯುತ್ತವೆ. ಅದರಂತೆಯೇ ಕರ್ನಾಟಕಿ ರಾಗಗಳೊಂದಿಗೆ ಆಟತಾಳ, ಆದಿತಾಳ, ತ್ರಿವಿಡಿ, ಬಲಂದಿ, ಝುಂಪತಾಳ ಉಳಿದುಕೊಂಡಿವೆ. ಕರ್ನಾಟಕಿಯ ಆದಿತಾಳ ಮತ್ತು ಅಟ್ಟತಾಳಗಳು, ಕ್ರಮವಾಗಿ ಹಿಂದೂಸ್ತಾನಿಯ ತ್ರಿತಾಲ ಮತ್ತು ದಾದರಾ ತಾಳಗಳೊಂದಿಗೆ ಸಾಮ್ಯತೆ ಪಡೆದು ಇನ್ನು ಇವುಗಳು ಪಾರಿಜಾತದಲ್ಲಿ ಜೀವಂತವಾಗಿವೆ.

ಒಟ್ಟಿನಲ್ಲಿ ಈಚಿನ ತಲೆಮಾರಿನವರು ರಾಗದ ಸ್ವರೂಪ ಧಾಟಿಗಳನ್ನು ನಿಷ್ಠೆಯಿಂದ ಕಾಯ್ದುಕೊಂಡು ಬಂದಿಲ್ಲ. ಹಿಂದಿನವರು ಅನುಕರಣೆ, ಲಘು ಸಂಗೀತದ ಮೇಲೆ ಮೋಹ ಇವುಗಳಲ್ಲಿಯೇ ಕಾಲ ಕಳೆಯುತ್ತಿದ್ದಾರೆ. ಸಂಗೀತದ ಬಗ್ಗೆ ನಿಶ್ಚಿತ ಶಿಕ್ಷಣವಿಲ್ಲದ್ದರಿಂದ ರಾಗಗಳ ಹೆಸರು ಮಾತ್ರ ಬದುಕಿಕೊಂಡಿವೆ. ತಲೆಮಾರಿನಿಂದ ತಲೆಮಾರಿಗೆ ಪ್ರದೇಶದಿಂದ ಪ್ರದೇಶಕ್ಕೆ ಸಾಗಿ ಬಂದಿರುವ ಈ ಪಾಂಚಾರಿ ಧಾಟಿಗೆಯ ತಮ್ಮತನ ಬದಲಿಸಿಕೊಂಡಿವೆ. ಒಂದೇ ಪಾದ ಬೇರೆ ಬೇರೆ ಮೇಳದವರು ಬೇರೆ ಬೇರೆ ರಾಗ-ದಾಟಿಗಳಲ್ಲಿ ಹಾಡುತ್ತಿದ್ದಾರೆ.

## ೨) ಸಂಭಾಷಣೆ :

ಸಣ್ಣಾಟಗಳಲ್ಲಿ ಅತಿ ಪ್ರಸಿದ್ಧ ಪಡೆದ ಬಯಲಾಟವೆಂದರೆ 'ಶ್ರೀಕೃಷ್ಣ ಪಾರಿಜಾತ'ವೆಂದೇ ಹೇಳಬಹುದು. ಪಾರಿಜಾತವು ಜನಪದ ಪ್ರೇಕ್ಷಕರ ವಿಶೇಷ ಗೌರವಕ್ಕೆ ಪಾತ್ರವಾಗಲು ಕಾರಣ ಇಲ್ಲಿಯ ಪಾತ್ರಗಳು, ಸಂಭಾಷಣೆ, ಹಾಡು, ಇವೆಲ್ಲಕ್ಕಿಂತ ಮುಖ್ಯವೆಂದರೆ ಹಾಗೂ ಪ್ರಧಾನ ಸಂಗೀತ, ಪಾರಿಜಾತದ ಪಾತ್ರನಿಗಿರುವ ಮಾತಿನ ಸ್ವಾತಂತ್ರ್ಯ ಮತ್ಯಾವ ಬಯಲಾಟದ ನಟನಿಗೂ ಇಲ್ಲ. ಪಾರಿಜಾತದಲ್ಲಿ ಬರುವ ಪಾತ್ರಗಳು ನಡು-ನಡುವೆ ತಮ್ಮ ಮಾತಿನ ಬುದ್ಧಿವಂತಿಕೆಯನ್ನು ಮರೆಯುತ್ತಾರೆ. ಹೀಗಾಗಿ ಇವರಿಗೆ ಪುರಾಣಗಳ ದಟ್ಟ ಪರಿಚಯವೂ ಮಾತಿನ ಹರಿತವೂ ಇರುತ್ತದೆ. ಪಠ್ಯವನ್ನು ಬಿಟ್ಟು ಪಠ್ಯೇತರ ಪುರಾಣ ಮಾತುಗಳನ್ನೆ ಸೇರಿಸಿ ಚೆನ್ನಾಗಿ ಮಾತನಾಡುವವನಿಗೆ ಈಗಲೂ ಹಳ್ಳಿಗಳು ತುಂಬ ಗೌರವಕೊಡುತ್ತಾರೆ. ಇಂಥ ಚಮತ್ಕಾರಿಕ ಮಾತಿಗೆ ಒಂದು ಉದಾ : "ನಕ್ಷತ್ರ ಸುತನನುಜ ನಕ್ಷತ್ರದೊಳಗಿನ ಬೆಣ್ಣೆ ನಕ್ಷತ್ರದಿಂ ಕೊಂಡು ನಕ್ಷತ್ರ ಬಂದಂತೆ ತಿಂದು ನಕ್ಷತ್ರದಿಂ ಹೊಡೆಯಲು ನಕ್ಷತ್ರದಲ್ಲಿ ಅಡಗಿಡ". ಒಗಟಿನಂತಿರುವ ಈ ಮಾತಿನ ಅರ್ಥ ಹೀಗೆದೆ. ಇಲ್ಲಿ ನಕ್ಷತ್ರ ಇದ್ದಲ್ಲೆಲ್ಲ ಒಂದು ನಕ್ಷತ್ರದ ಹೆಸರು ಹೊಂದಿಸುತ್ತಾ ಹೋಗಬೇಕು. ನಕ್ಷತ್ರ ಸುತನನುಜ (ರೋಹಿಣಿ ನಕ್ಷತ್ರ) ರೋಹಿಣಿಯ ಮಗ ಬಲರಾಮ ಅವನ ಸಹೋದರ ಶ್ರೀಕೃಷ್ಣ ನಕ್ಷತ್ರದೊಳಗಿನ ಬೆಣ್ಣೆ (ಭರಣಿ ನಕ್ಷತ್ರ) ಭರಣಿಯೊಳಗಿನ ಬೆಣ್ಣೆ. ನಕ್ಷತ್ರದಿಂ ಕೊಂಡು (ಹಸ್ತಾ ನಕ್ಷತ್ರ) ಹಸ್ತದಿಂದ ತೆಗೆದುಕೊಂಡು ನಕ್ಷತ್ರ ಬಂದಂತೆ ತಿಂದ (ಚಿತ್ತಾ ನಕ್ಷತ್ರ) ಚಿತ್ತ ಬಂದಂತೆ ತಿಂದ ನಕ್ಷತ್ರದಿಂ ಹೊಡೆಯಲು (ಹಸ್ತಾ ನಕ್ಷತ್ರ) ಹಸ್ತದಿಂದ ಹೊಡೆಯಲು ನಕ್ಷತ್ರದಲ್ಲಿ ಅಡಗಿದ (ಮೂಲಾ ನಕ್ಷತ್ರ) ಮೂಲೆಯಲ್ಲಿ ಅಡಗಿದೆ"[೧].

ಈ ತರದ ಬೌದ್ಧಿಕ ಕಸತ್ತು ನಟ ಪ್ರೇಕ್ಷಕರಿಬ್ಬರಿಗೂ ಅಚ್ಚು ಮೆಚ್ಚಿನದಾಗಿದೆ. ಬಹಳಷ್ಟು ನಟರು ಓದಿಕೊಂಡವರು, ಸಾಮರ್ಥ್ಯ ಇದ್ದವರು. ಈ ಅತಿ ಬುದ್ಧಿವಂತಿಕೆಯಿಂದ ಪಾತ್ರ ಸನ್ನಿವೇಶಗಳು ಔಚಿತ್ಯ ಹೇಳ ಹೆಸರಿಲ್ಲದೆ ಪರಾರಿಯಾಗುತ್ತದೆ. ಮಾತು ಸಂಭಾಷಣೆಯಾಗಿರದೆ ಪ್ರವತವನಾಗುತ್ತದೆ. ಕೆಲ ಕಲಾವಿಧರು ಪ್ರೇಕ್ಷಕರ ಭಾವಾಭಿರುಚಿಯಂತೆ ರಂಗ ನೋಡಿ ರಾಗ ಮಾಡು ಎನ್ನುವಂತೆ ಪಾತ್ರಧಾರಿಗಳು ತಮ್ಮ ತಮ್ಮ ಪಾತ್ರವನ್ನು ನಿರ್ವಹಿಸುತ್ತಾರೆ.

### ಭಾಗವತ :

ಶ್ರೀಕೃಷ್ಣ ಪಾರಿಜಾತ ಬಯಲಾಟದಲ್ಲಿ ಒಂದರ್ಥದಲ್ಲಿ ನಾಯಕ ಭಾಗವತನೆಂದೇ ಹೇಳಬೇಕು. ಆಟ ನಡೆಸುವವನೇ ಇವನೇ ಭಾಗವತನನ್ನು ಇತರ ಪಾತ್ರಗಳು ದೂತಿ ಎಂದು ಸಂಭೋಧಿಸುತ್ತವೆ. ಪ್ರೇಕ್ಷಕರ ಲೆಕ್ಕದಲ್ಲಿ ಭಾಗವತ ಪಾತ್ರಗಳ ಲೆಕ್ಕದಲ್ಲಿ ದೂತಿ ಹೀಗೆ ಎರಡು ಮುಖಗಳು. ಈ ಬಯಲಾಟದ ಸೂತ್ರಧಾರ ವ್ಯಕ್ತಿ ಇವನಾಗಿದ್ದರೂ ಇವನನ್ನು ಪ್ರಮುಖ ಪಾತ್ರ ಎಂದು ಹೇಳಲಾಗುವುದಿಲ್ಲ.

---

೧. ಸಂಶೋಧನಾ ಗ್ರಂಥ ಮಾಲೆ ೪೪ : ಡಾ॥ ಬಸವರಾಜ ಮಲಶೆಟ್ಟಿ : ಪುಟಸಂಖ್ಯೆ – ೧೬೫.

ಈ ದೂತಿಯ ಪಾತ್ರಧಾರಿಯು ಆರಂಭದಿಂದ ಕೊನೆಯವರೆಗೆ ರಂಗದ ಮೇಲಿರುತ್ತಾನೆ. ಪಾತ್ರಗಳು ತಾವು ತಾವೇ ಸಂಭಾಷಣೆಗೆ ತೊಡಗುವುದಕ್ಕಿಂತ ಹೆಚ್ಚಾಗಿ ದೂತಿಯೊಂದಿಗೆ ಮಾತು–ಚರ್ಚೆಗೆ ನಿಲ್ಲುತ್ತವೆ. ಒಟ್ಟಾರೆ ಪ್ರೇಕ್ಷಕರ ಕಣ್ಣಿಗೆ ಹೆಚ್ಚು ಬೀಳುವ ಪಾತ್ರವೆಂದರೆ ದೂತಿ. ಈ ದೂತಿ ಪಾತ್ರ ಗಂಡಾಗಿದ್ದರು ಸಂಭಾಷಣೆಯಲ್ಲಿ ಹೆಣ್ಣು ಎಂದೇ ಅರ್ಥ ಕೊಡುವಂತೆ ಎಲ್ಲ ಪಾತ್ರಗಳು ಬಳಕೆ ಮಾಡುತ್ತವೆ.

ಬಯಲಾಟ ಪ್ರಾರಂಭದ ಸ್ತುತಿಪದ, ಕಥಾರಂಭದ, ಪದಗಳನ್ನು ಹಾಡಿ ಉಳಿದ ಸಮಯ ಪಾತ್ರಗಳ ಹಾಡಿಗೆ ಹಿಮ್ಮೇಳದ ಧ್ವನಿ ಒದಗಿಸುತ್ತಾನೆ. ಆದ್ದರಿಂದ ಇಲ್ಲಿಯ ಭಾಗವತ ದೂತಿ, ಸೂತ್ರಧಾರ, ಹಿಮ್ಮೇಳ ಈ ಮೂವರು ಮಿಶ್ರಣಗೊಂಡ ಪಾತ್ರವಾಗಿದೆ.

ಪಾರಿಜಾತದ ಬಯಲಾಟದಲ್ಲಿ ಪ್ರತಿಯೊಂದು ಸನ್ನಿವೇಶ ತಿಳಿ ಹಾಸ್ಯದ ವಾತಾವರಣದಲ್ಲಿ ಜರುಗುತ್ತದೆ. ಇಲ್ಲಿಯ ಹಾಸ್ಯ ವಿಶೇಷವಾದದ್ದು, ದೂತಿ ಅಟ್ಟದ ಮೇಲೆ ಬರುವ ಪ್ರತಿಪಾತ್ರದ ಪರಿಚಯ ಮಾಡಿಕೊಟ್ಟ ಹಿಂದೆ ಸರಿಯುವುದಿಲ್ಲ. ಪ್ರತಿ ಸನ್ನಿವೇಶದ ನಾಟಕ ಕ್ರೀಯೆಯಲ್ಲಿ ಇತರ ಪಾತ್ರಗಳೊಂದಿಗೆ ತಾನೂ ಭಾಗಿಯಾಗಿರುತ್ತಾನೆ. ಒಮ್ಮೊಮ್ಮೆ ಇವನ್ನೊಂದಿಗೆ ಇನ್ನೊಬ್ಬ ಹಿಮ್ಮೇಳದವನೂ ಸೇರಿಕೊಳ್ಳುತ್ತಾನೆ. ಇವನಿಗೆ ಮರಿ ಭಾಗವತವೆನ್ನುವರು. ಇಬ್ಬರೂ ಸೇರಿ ನಡೆಸಿಕೊಡುವ ಆರಂಭದ ಗಣಸ್ತುತಿ ಭಾಗ ತನ್ನಷ್ಟಕ್ಕೆ ತಾನೇ ಸ್ವತಂತ್ರ್ಯ ಹಾಸ್ಯರಸದಲ್ಲಿ ತೇಲಿ ಬರುವಂತಾಗುತ್ತದೆ.

| | | |
|---|---|---|
| **ದೂತಿ** | : | ಕರಿಗಡಬು ಅಂದರೆ ಹೀಗೆ ಮಾಡಬೇಕು. ಪಾವು ಬ್ಯಾಳಿಗೆ ಪಂಛೇರ ಬೆಲ್ಲಾ ಹಾಕಬೇಕು. |
| **ಮರಿದೂತಿ** | : | ಅದರಾ ಒಂದೀಟು ಕಡಿಮೆಯಿದ್ದರ ನಡ್ಯಾಕಿಲ್ಲೋನ್ರಿ? |
| **ದೂತಿ** | : | ಮತ್ತೆ ಅದರಾಗ ಕಲ್ಲುಸಕ್ಕರಿ, ಕೇರಬೀಜ, ಮಣೂಕ. |
| **ಮರಿದೂತಿ** | : | ಹಾ. ನಿಂದಿರ್ರಿ.. ಹಿಂದಡೆ ನ್ಯಾಯ ಬರಬಾರದು. ಮಣೂಕು ಅಂದ್ರೆಲ್ಲಾ ಏನ ಎಮ್ಮಿದೋ, ಆಕಳದೋ? |
| **ದೂತಿ** | : | ಕ್ವಾಣನ ತಮ್ಮಂದು, ಮೂರ್ಖಾ ಅದು ಮಣುಕು ಅಲ್ಲ. ಮಣೂಕು ದೀಪದ್ರಾಕ್ಷಿಗೆ ಮಣೂಕ ಅಂತಾರ. |

| | | |
|---|---|---|
| **ಮರಿಭಾಗವತ** | : | ಈ ರಾಯರಿಗೆ ಮತ್ತೇನ ಬೇಕ್ರಿ? |
| **ಭಾಗವತ** | : | ಸಣ್ಣಕ್ಕಿ ಬೇಕು. |
| **ಮರಿಭಾಗವತ** | : | ಖಬರದಾರss.. |
| **ಭಾಗವತ** | : | ಯಾಕೋ? |
| **ಮರಿಭಾಗವತ** | : | ಏನ್ರಿ. ಇಷ್ಟತ್ತನಕ ನೀವು ಹೇಳಿದ್ದೇಲ್ಲಾ ಹೂಂ ಅಂದ್ಯಾ, ಸಲಗಿ ಸಿಕ್ಕೇನ ನಿಮಗ? ಭಾಳ ಎಚ್ಚರದಿಂದ ಮಾತಾಡ್ರಿ. ಈಗ ಸಣ್ಣಾಕಿ ಅಂತೀರಿ, ಇನ್ನೋಟು ನಿಂತು, ದೊಡ್ಡಾಕಿ ಅಂತಿರಿ. |

| | | |
|---|---|---|
| **ಭಾಗವತ** | : | ಊಟ ಆದ ಕೂದಲೇ ಏನು ಕೊಡತಕ್ಕದ್ದು. |
| **ಮರಿಭಾಗವತ** | : | ಬಾಳತ್ರಾಸ ಅನಿಸಿದ್ರೆ, ಎರಡು ಜುಲಾಬಿನ ಗುಳಗಿ ಕೊಡಬೇಕು. |
| **ಭಾಗವತ** | : | ಅವ್ಯಾಕೋ....? |
| **ಮರಿಭಾಗವತ** | : | ತಿಂದದ್ದೆಲ್ಲಾ ಹೊರಗ ಹಾಕಾಕss.. |

ಹೀಗೆ ಬಯಲಾಟ ಪ್ರಾರಂಭದಿಂದ ಮಂಗಲವಾಗುವವರೆಗೂ ನಿರಂತರ ಚಟುವಟಿಕೆಯಿಂದ ಆಟ ಎಲ್ಲಿಯೂ ಬೇಸರ ತರಿಸುವುದಿಲ್ಲ. ಅಲ್ಲದೇ ಶ್ರೀಕೃಷ್ಣ ತನ್ನ ವೇಷವನ್ನು ಬಿಟ್ಟು, ಕೊರವಂಜಿಯ ವೇಷತೊಡುವ ಸಂದರ್ಭದಲ್ಲಿ ಪ್ರೇಕ್ಷಕರನ್ನು ನಗೆ ಗಡಲಲ್ಲಿ ತೇಲಿ ಬಿಡುವಂತೆ ಸಂಭಾಷಣೆಯನ್ನು ನೋಡಬಹುದು.

| | | |
|---|---|---|
| **ಕೃಷ್ಣ** | : | ದೂತೆ ಜಡೆಗಳನ್ನು ಬಿಚ್ಚಿ ಸಂಪಿಗೆ, ಮಲ್ಲಿಗೆ, ಗುಲಾಬಿ ಮೊದಲಾದ ಸುಗಂಧದ ಎಣ್ಣೆಗಳನ್ನು ಹಚ್ಚಿಕೊಂಡಿದ್ದೇನೆ. |
| **ದೂತಿ** | : | ಇನ್ನೊಂದು ಎಣ್ಣೆ ಬಿಟ್ರೆಲ್ಲ? |
| **ಕೃಷ್ಣ** | : | ಅಧ್ಯಾವ ಎಣ್ಣೆ. |
| **ದೂತಿ** | : | ಬೇವಿನ ಎಣ್ಣೆ? |
| **ಕೃಷ್ಣ** | : | ದೂತೆ ಶಂಖಮಣಿ, ತಾವರೇವಣಿ, ಕರ್ಪೂರಮಣಿ, ಬಿಂಕದ ತುಳಸಿಮಣಿ, ಶ್ರೀಗಂಧಮಣಿ ಸ್ಪಟಿಕಮಣಿಗಳನ್ನು ಕೊರಳಲ್ಲಿ ಧರಿಸಿದ್ದೇನೆ. |
| **ದೂತಿ** | : | ಏನ್ರಿ, ಇನ್ನೊಂದೆರಡು ಮಣಿಬಿಟ್ಟಂಗ ಕಾಣತಾದ? |
| **ಕೃಷ್ಣ** | : | ಅವು ಯಾವುವು. |
| **ದೂತಿ** | : | ಹೋಳಿಗೆ ಮಣಿ, ಕೂಡ್ರುಮಣಿ? |
| **ಕೃಷ್ಣ** | : | ದೂತೆ...... ಸುಳಿನಾಭಿಯಲ್ಲಿ ಹೊನ್ನಗಂಟೆ ಕಟ್ಟಿದ್ದೇನೆ. |
| **ದೂತಿ** | : | ಇನ್ನೊಂದು ಗಂಟೆ ಬಿಟ್ರೆಲ್ಲ? |
| **ಕೃಷ್ಣ** | : | ಅದ್ಯಾವುದು. |
| **ದೂತಿ** | : | ಗೌಳಿಗರ ಎಮ್ಮಿಯ ಕೊಳ್ಯಾಂದು? |

ಈ ರೀತಿಯಾಗಿ ದೂತಿಯ ಪಾತ್ರವು ಸಹಜವಾಗಿ ದ್ವಂದ್ವಾರ್ಥಕೊಡುವಂತ ಪದ ಪ್ರಯೋಗಗಳು ಬಳಸಿದರೂ ಅದು ತಿಳಿಹಾಸ್ಯದಿಂದ ಕೂಡಿಕೊಂಡು ಪ್ರೇಕ್ಷಕರನ್ನು ರಂಜಿಸುತ್ತ ಆಟ ಸಾಗುತ್ತದೆ.

ಕೃಷ್ಣ ಭಾಮೆಯರ ಸಂಭಾಷಣೆಯಲ್ಲಿ ತತ್ವವಿಚಾರ. ಶ್ರೀಕೃಷ್ಣ ಮತ್ತು ರುಕ್ಮಿಣಿ ಪಗಡೆಯಾಡುತ್ತ ಕುಳಿತಿದ್ದಾರೆ. ಸಿಟ್ಟನಿಂದ ಬಂದ ಸತ್ಯಭಾಮೆಗೆ ಎಲ್ಲವು ವಿಚಿತ್ರವೆನಿಸುತ್ತದೆ. ಆಗ ದೂತಿಯನ್ನು ಕರೆದುಕೊಂಡು ಬಂದಿದ್ದರಿಂದ ದೂತಿಯು ಕೃಷ್ಣನನ್ನು ಕುರಿತು.

ಭಾಗವತ : ಯೆವ್ವಾ ಇಲ್ಲೇ ನಿಂತ್ರ ಯಾರ ಕೇಳಿತಾರ್ರಿ? ನಾನೇ ಹೋಗಿ ಸ್ವಲ್ಪ ಮಾತಾಡಿಸಿಕೊಂಡು ಬರತೇನಿ, ಅಪ್ಪವರೇ ನಮಸ್ಕಾರ.

ಕೃಷ್ಣ : ಬಾ ದೂತೆ, ಬಾ, ಬಹಳ ದಿವಸಕ್ಕೆ ಬಂದಿ?

ದೂತಿ : ಸುಮ್ನೆ ಬಂದೆ. ಅಲ್ರೆಪ್ಪಾ ಇದೇನ್ರಿ ನೀವು ಆಡೋದು?

ಕೃಷ್ಣ : ಇದು ಪಗಡಿ.

ದೂತಿ : ಇದೇನ್ರಿ ಹಾಕಿದ್ದು? ಗಟ್ಟುಳ್ಳ ಅರಿವಿ ಸಿಗಲಿಲ್ಲೇನ ನಿಮಗ? ನಾಲ್ಕು ತುಕಡಿ ಆಗೇತಿ.

ಕೃಷ್ಣ : ದೂತೆ ಇವು ನಾಲ್ಕು ತುಕಡಿಗಳಲ್ಲ. ನಾಲ್ಕು ಆಶ್ರಮಗಳು. ಪಗಡಿ ಆಟಕ್ಕೂ ಜೀವನದಾಟಕ್ಕೂ ನಿಕಟ ಸಂಬಂಧವಿದೆ. ವ್ಯಕ್ತಿಯ ಜೀವನದಲ್ಲಿ ಬ್ರಹ್ಮಚಾರ್ಯ, ಗೃಹಸ್ಥ, ವಾನಪ್ರಸ್ತ, ಸನ್ಯಾಸ ಈ ನಾಲ್ಕು ಆಶ್ರಮಗಳಾಗಿವೆ.

ದೂತಿ : ಇಲ್ಲೊಂದು ಕತ್ರಿ ಹಾಕ್ಯಾರಲ್ರಿ, ಅದೇನು?

ಕೃಷ್ಣ : ಇದು ಕಟ್ಟೀಮನೆ, ಕಟ್ಟೀಮನೆ ಅಂದರೆ ಗುರುಮನೆ ಇದ್ದಂತೆ.



ದೂತಿ : ಅಂದ್ರ ಇಲ್ಲಿ ಬಂದು ಕೂತರ ಯಾರ ಅಂಜಿಕೇನು ಇಲ್ಲೋನ್ರಿ?

ಕೃಷ್ಣ : ಅಂಜಿಕೆ ಇಲ್ಲ. ಅದಕ್ಕೆಂದೇ ಅದನ್ನು ಗುರುಮನೆಯೆಂದು ಕರೆಯುತ್ತಾರೆ. ಕಟ್ಟಿಮನೆಗಳನ್ನು ಬಿಟ್ಟು ಉಳಿದ ಎಂಬತ್ನಾಲ್ಕು ಮನೆಗಳನ್ನು ಒಳಗೊಂಡುದೇ ಪಗಡಿ. ಪಟ್ಟಿ, ಮಾನವ ಜನ್ಮಕ್ಕೆ ಅಧಿಕಾರದ ಪಟ್ಟ ಗೆಲ್ಲುವ ಕಾಯಿಗಳು ಎಂಟು. ಸೋಲುವ ಕಾಯಿಗಳು ಎಂಟು. ಅಷ್ಟಾವರಣ ಹೊಂದಿ ಪರಿಶುದ್ಧವಾದ ಕಾಯಿಗಳು ಗೆಲ್ಲುತ್ತವೆ. ಅಷ್ಟಮದದಿಂದ ಕೂಡಿದ ಕಾಯಿಗಳು ಸೋಲ್ಲುತ್ತವೆ. ದಶ್ಯಾ ಬಿದ್ದ ನಂತರ ಕಾಯಿ ಹಚ್ಚಲು ಅಧಿಕಾರ ಬರುತ್ತದೆ. ಅದಕ್ಕೆ ಕೈ ಹತ್ತಿತೆಂದು ಹೇಳುವರು.

ದೂತಿ : ಕವಡಿ ಆರು ಯಾಕ ಬೇಕ್ರಿ?

ಕೃಷ್ಣ : ಆರು ಗುಣಗಳೇ ಆರು ಕವಡಿಗಳು ಈ ಕವಡಿಗಳಲ್ಲಿ ಐದು ಡಬ್ಬ ಬಿದ್ದು ಒಂದು ಚಿತ್ತ (ಅಂಗಾತ) ಆದರೆ ದಶ್ಯಾ ಅಂತಾರೆ. ಇದರ ಅರ್ಥ ಇಷ್ಟೆ : ಶಬ್ಧ, ಸ್ಪರ್ಶ, ರೂಪ, ರಸ, ಗಂಧ, ಈ ಪಂಚೇಂದ್ರಿಯಿಗಳು ವ್ಯಾಪಾರವನ್ನು ನಿಲ್ಲಿಸಿ, ಚಿತ್ತವನ್ನು ಪರಮಾತ್ಮನ ಕಡೆಗೆ ತಿರುಗಿಸುವುದೇ ದಶ್ಯಾದ ಲಕ್ಷಣ. ಇಪ್ಪತ್ತೆದು ತತ್ವಗಳ ಸರಿಯಾದ ತಿಳುವಳಿಕೆಯೆ ಪಂಚವೀಸ, (ಇಪ್ಪತ್ತೈದು) ಹನ್ನೆರಡು ಜ್ಯೋತಿರ್ಲಿಂಗಗಳ ಪ್ರತೀಕವೇ ಬಾರಾ. (ಹನ್ನೇರು) ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಈ ಆಟದ ಗುಣಗಳು ಡಬ್ಬು ಬೀಳುವುದೇ ಚಕ್ಕಾದ ಲಕ್ಷಣ. ಹೊನ್ನು, ಹೆಣ್ಣು, ಮಣ್ಣು ಇವನ್ನು ಸರಿಯಾಗಿ ತಿಳಿಯುವುದೇ ತೀನಿ, (ಮೂರು) ಪ್ರಪಂಚ, ಪಾರಮಾರ್ಥಗಳೆರಡನ್ನು ಹೊಂದಿಸಿಕೊಂಡು ಸುಖ ಹೊಂದುವುದೇ ದೋನಿಯ ಲಕ್ಷಣ. (ಎರಡು) ಕಾಯಿ ಅಂದರೆ ಕಾಯ, ಹೊಟ್ಟೀಮನೆಯಲ್ಲಿ ಹುಟ್ಟಿ ಕಟ್ಟೀಮನೆ ಸೇರುವುದೇ ಕಾಯಧರ್ಮ, ಸಾಲೋಕ್ಯ, ಸಾಮಿಪ್ಯ, ಸಾರೋಪ್ಯ, ಸಾಯುಜ್ಯ ಈ ಚತುರ್ಮುಕ್ತಿ ಪಡೆಯುವಂತೆ ಮಾಡುವುದೇ ಚಾರಿ, (ನಾಲ್ಕು) ಒಟ್ಟಿನಲ್ಲಿ ಈ ಪ್ರಪಂಚವೊಂದು ಪಗಡಿಯಾಟ, ದೂತೆ ತಿಳಿಯತೆ?

ಅದೇ ರೀತಿಯಾಗಿ ಶ್ರೀಕೃಷ್ಣ ಸತ್ಯಭಾಮೆಂಬರ ಸಂಭಾಷಣೆಯಲ್ಲಿ ಪರಾತ್ಪರ ಶಕ್ತಿಯ ಕುರಿತು ವಿವರಣೆ ನೋಡೋಣ. ಪಾರಿಜಾತ ಪುಷ್ಪ ಕೊಡುತ್ತೇನೆಂದು ಮಾತು ಕೊಟ್ಟಾಗ, ಕೃಷ್ಣ ಅದನ್ನು ತೆಗೆದುಕೊಂಡೆ ತೀರುತ್ತೇನೆಂದು ಸತ್ಯಭಾಮೆಯ ವಿಚಾರ :

ಸತ್ಯಭಾಮೆ : ದೂತೆ ಪರಮಾತ್ಮರಿಂದ ವಚನ ಸಿಕ್ಕಿತು, ಇನ್ನೇನು? ಪಾರಿಜಾತ ವೃಕ್ಷವೇ ಮನೆಗೆ ಬಂದರೆ ಹೂವಿಗೇನು ಕಡಿಮೆ? ಆ ಮೇಲೆ ಇವರು ನಾ ಹೇಳಿದ್ಹಾಂಗ ಕೇಳತಾರ. ಈ ಹುಚ್ಚ ನನ್ನ ಸವತಿ ನಾ ಹೇಳಿದ್ಹಾಂಗ ಕುಣಿತಾಳ.

ಕೃಷ್ಣ : ದೂತೆ ಪಾರಿಜಾತ ಪುಷ್ಪ ಎಲ್ಲಿ ಅದ?

ದೂತೆ : ಅವ್ವಾವರ ಹತ್ತಿರ ಐತ್ರಿ?

ಕೃಷ್ಣ : ಸತ್ಯಭಾಮೆ ಪುಷ್ಪ ಎಲ್ಲಿ ಅದ?

ಸತ್ಯಭಾಮೆ : ತಂದು ಕೊಡತೀನಂತ ವಚನ ಕೊಟ್ರೇರಲ್ರಿ?

ಕೃಷ್ಣ : ಕೊಡತೀನಂತ ಹೇಳಿದರೆ ಕೊಟ್ಟ ಹಾಗೆ ಆಗಲಿಲ್ಲ.

ಸತ್ಯಭಾಮೆ : ಹಾಗಾದರೆ ನಾನು ಪುಷ್ಪ ತೆಗೆದುಕೊಳ್ಳದೇ ಬಿಡುವುದಿಲ್ಲ.

| | | |
|---|---|---|
| **ದೂತಿ** | : | ಸದ್ಯಕ್ಕೆ ಇದ್ದ ಮಷ್ಪನ ಕೊಟ್ಟು ಬಿಡ್ರಿ. ಗಿಡಾ ಬೇಕಾದಾಗ ಬರವಲ್ಲದ್ಯಾಕ. |
| **ಕೃಷ್ಣ** | : | ಅದಂತೂ ಸಿಗುವುದೇ ಇಲ್ಲ. |
| **ಸತ್ಯಭಾಮೆ** | : | ತೆಗೆದುಕೊಳ್ಳದೇ ಬಿಡುವುದಿಲ್ಲ. |
| **ಕೃಷ್ಣ** | : | ಇಲ್ಲದಿದ್ದರೆ, ಏನ ಮಾಡತೀರಿ? |
| **ದೂತಿ** | : | ನಾವು ಗಟ್ಟಿಯಾಗಿ ಹಿಡಿತೀನಿ. ಅವ್ವ ಕಸಗೊಂತಾಳ. |
| **ಕೃಷ್ಣ** | : | ಎಷ್ಟೊಂದು ಅಹಂಕಾರ ನಿಮಗೆ, ನಾನಾರು ಗೊತ್ತೆ? |

**ಶ್ಲೋಕ : ಭೂಪರಾಗ :**

ಯಜ್ಞ ಯಾಗಾದಿಗಳಲಿಲ್ಲ । ನೂರು, ತೀರ್ಥಂಗಳಲಿಲ್ಲ
ನಾರಿ ವೈಕುಂಠದಲ್ಲಿ ನಾನಿಲ್ಲ । ಸನ್ಯಾಸಾಶ್ರಮದಲಿಲ್ಲ
ಅಹಂಕಾರ ಕರ್ಮಕ್ಕೆ ದೂರ ನಾನಿರುವೆ ಭಾಮೆ ।

| | | |
|---|---|---|
| **ಕೃಷ್ಣ** | : | ನಿಮ್ಮಂತಹ ಅಹಂಕಾರಿಗಳಿಗೆ ಮಷ್ಪ ಸಿಗುವುದಿಲ್ಲ. |
| **ಸತ್ಯಭಾಮೆ** | : | ನಾ ಅದನ್ನು ಬಿಡುವುದಿಲ್ಲ. |
| **ಕೃಷ್ಣ** | : | ಸತ್ಯಭಾಮೆ, ಛಲಕ್ಕೆ ನಾನೊಲಿಯಲಾರೆ, ಧ್ಯಾನಕ್ಕೆ ದೂರ ಇರಲಾರೆ. ನಿನಗೆ ತಿಳಿದದ್ದು ಮಾಡು, ನಾನು ಮಾತ್ರ ಇಲ್ಲಿಂದ ಹೊರಟೆ. |

ಹೀಗೆ ಪ್ರತಿಯೊಂದು ಪಾತ್ರವೂ ಒಂದಿಲ್ಲೊಂದು ಸನ್ನಿವೇಶದಲ್ಲಿ ಕೃಷ್ಣನ ಸ್ತುತಿಗೆ ಅವಕಾಶ ಮಾಡಿಕೊಂಡಿದೆ. ಈ ಸ್ತುತಿಗಳಲ್ಲಿ ಕೃಷ್ಣಮಹಿಮೆಗಳೇ ತುಂಬಿವೆ. ಆನಂತರದಲ್ಲಿ ಭಕ್ತಿಯ ತರುವಾಯ ಶೃಂಗಾರ ರಸ ಮುಖ್ಯವಾಗುತ್ತದೆ. ಹೀಗೆ ಪ್ರತಿ ಮಾತಿನಲ್ಲಿ ಕನ್ನಡ ಜನಪದದ ಜೀವಂತಿಕೆ ತುಂಬಿಕೊಂಡಿದೆ.

## ಅಧ್ಯಾಯ – ೬

# ಸಮಾರೋಪ

ಮನುಷ್ಯನಿಗೆ ಸಂತಸವಾದಾಗ ಹಾಡುವುದು, ಕುಣಿಯುವುದು ಸ್ವಾಭಾವಿಕ. ಅದರಲ್ಲೂ ಮಳೆ, ಬೆಳೆ ಬಂದ ಹಿಗ್ಗಾದಾಗ ಕೃತಜ್ಞನಾಗಿ ದೇವರೆದುರಿಗೆ ಭಯ–ಭಕ್ತಿಯಿಂದ ಹಾಡಿ–ಕುಣಿದು, ಕೆಲವೊಮ್ಮೆ ತಾನೇ ದೇವರೆಂದು ಇಲ್ಲವೇ ದೇವರೆ ತನ್ನಲ್ಲಿದೇ ಎಂದು ವಿರಾವೇಶದಲ್ಲಿ ನಟಿಸಿ, ಅದರ ಸಾಹಸ ಮುಂತಾದವುಗಳನ್ನು ವಿವರಿಸಿ ತೋರುವ ಕಲೆ ಸಹಜವಾಗಿ ಬೆಳೆದು ಬಂದಿತು. ಕಾಲಕ್ರಮದಲ್ಲಿ ಕಲಾಭಾವನೆ ಹೆಚ್ಚಿ ಮೇಳ ಅಳವಟ್ಟು ಅದರ ನಾಯಕನಿಗೆ ಪ್ರಾಧ್ಯಾನ್ಯವೊದಗಿ ಇತರರೊಡನೆ ಸಂವಾದ ಬೆಳದಿರಬೇಕು. ಈ ಬೆಳವಣಿಗೆಯಲ್ಲಿ ರಾಮ–ಕೃಷ್ಣರಂಥ ವೀರ ಪುರುಷರ ಜೀವನ ಚಿತ್ರಣ ಸೇರಿ ವಿವಾಹಕ್ಕೆ ಸಂಬಂಧಿಸಿದ ನಾಟಕಗಳು, ಪ್ರತಿನ್ಯಾಯ ಸಂಘರ್ಷಗಳು ಪ್ರಾಶಸ್ತ್ಯ ಪಡೆದು ಅಭಿನಯ ಕಲೆ ಅರಳುತ್ತ ಬಂದಿತು. ಜೀವನದಲ್ಲಿ ವೀರ, ಶೃಂಗಾರ, ಹಾಸ್ಯ – ಕರುಣ ರಸಗಳ ಅವಿಸ್ಕಾರಗಳು ತುಂಬಿಕೊಂಡು ಬಂದವು. ಈ ರಸ ಸೃಷ್ಟಿಗೆ ಮೂಲ ನೃತ್ಯ–ಸಂಗೀತಗಳನ್ನು ಬಳಸಿಕೊಂಡು ದೇಶಿಯ ನಾಟಕಗಳು ವಿಶೇಷವಾಗಿ ಬಳಸಿಕೊಂಡು ಬಂದಿತು. ಹಳ್ಳಿಯಲ್ಲಿ ನಡೆಯುವ ಜಾತ್ರೆ ಉತ್ಸವ, ಓಕಳಿ ಮುಂತಾದ ಶುಭ ಸಮಾರಂಭಗಳಲ್ಲಿ ಊರಿನ ಜನರು ಸಂತೋಷ ಪಡುವ ಮತ್ತು ಲೋಕದ ರೀತಿ–ನೀತಿಗಳು ತಿಳಿಯುವ ಕಥಾವಸ್ತುಗಳುಳ್ಳ ವಿಷಯಗಳನ್ನಾಧರಿಸಿ 'ಕಲಾ ರೂಪದ' ನಾಟಕಗಳು ಪ್ರಾರಂಭವಾದವು. ಈ ನಾಟಕದೊಂದಿಗೆ ಸಂಗೀತ–ನೃತ್ಯ ಸೇರಿಕೊಂಡು ಮನರಂಜನೆಯೊಂದಿಗೆ ನೀತಿ ಪಾಠ ಕಲಿಯುವಂತೆ ರಂಗ ಭೂಮಿಯ ಕಲೆಯು ಪ್ರಸಿದ್ಧಿಯನ್ನು ಪಡೆಯಿತು.

ಪ್ರಸ್ತುತ 'ಶ್ರೀಕೃಷ್ಣ ಪಾರಿಜಾತದ ಕೊರವಂಜಿ' ಪಾತ್ರವು ವಿಶೇಷತೆಯಿಂದ ಕೂಡಿದ್ದಾಗಿದೆ. ಮನುಷ್ಯ ಮನುಷ್ಯರ ಅಂತರಂಗವನ್ನು ತಿಳಿಯುವದಕ್ಕಾಗಿ ಬೇರೊಂದು ರೂಪಧರಿಸಿ, ಅವನ ಅಂತರಂಗದಲ್ಲಿ ಇರುವ ವಿಷಯವನ್ನು ತಿಳಿದು ಅವನಲ್ಲಿದ್ದ ಲೋಪದೋಶಗಳನ್ನು ತಿಳಿಸಿ ಕೊಡುವುದೇ ಆಗಿದೆ. ಅವನ ಮನಸ್ಸಿನ ಭಾವನಾ ವಲಯಗಳು ಹೇಗೆ ವಿಚಲಿತವಾಗುತ್ತವೆ. ಅವನಿಲ್ಲದಿದ್ದರೆ ಬದುಕಿನ ಅರ್ಥವೇನು? ಎಂಬ ಪ್ರಶ್ನೆಗಳು ಹುಟ್ಟುತ್ತವೆ. ಇಲ್ಲಿ ಪ್ರಕೃತಿ–ಪುರುಷ (ಸ್ತ್ರೀ–ಪುರುಷ) ಇವರಿಬ್ಬರು ಸಮಾನರು, ಒಬ್ಬರಿಲ್ಲದೇ ಒಬ್ಬರಿಗೆ ಗತಿ, ಮತಿ, ಯಾವುದು ಇಲ್ಲ. ಹೀಗಾಗಿ ಶ್ರೀಕೃಷ್ಣನಿಗೂ ಕೂಡಾ ಸತ್ಯಭಾಮೆಯಿಲ್ಲದ ಜೀವನ, ಜೀವನವೇ ಅಲ್ಲ ಎಂಬ ಭಾವ ಅವನಲ್ಲಿದೆ. ಹೀಗೆ ಜನ ಸಾಮಾನ್ಯರಲ್ಲೂ ಸಂಸಾರಿಕ ಜೀವನದ ಸಾಗರದಲ್ಲಿ ಸಮ–ಸಮನಾಗಿ ಹೆಜ್ಜೆ ಹಾಕಿದರೆ ಸಂಸಾರದ ಡೋಣಿ ಸಂಸಾರವೆಂಬ ಸಾಗರ ದಾಟಬಲ್ಲದು ಎಂಬ ಮಾತು ಕೊರವಂಜಿಯ ಹಿತೋಪದೇಶದಿಂದ ತಿಳಿದು ಬರುತ್ತದೆ.

ಶ್ರೀಕೃಷ್ಣ ಪಾರಿಜಾತದಲ್ಲಿ ಕೊರವಂಜಿಯ ಪಾತ್ರವು ಮೂಲತಃ ತೆಲುಗಿನಿಂದ ಬಂದಿದ್ದಾಗಿದೆ. ಶ್ರೀಕೃಷ್ಣ ಪಾರಿಜಾತವನ್ನು ತರುವುದನ್ನು ಸತ್ಯಭಾಮೆಗೆ ಹೇಳುವುದರೊಂದಿಗೆ ಈ ಕಥೆ ಪ್ರಾರಂಭವಾಗುತ್ತದೆ. ಸತ್ಯಭಾಮಾ ವಿರಹ, ಸತ್ಯಭಾಮಾ ಕೃಷ್ಣರ ಸಂದೇಶಗಳು, ಸಂವಾದಗಳು, ಸತ್ಯಭಾಮಾನಲ್ಲಿಗೆ ಸರಸ್ವತಿ ಕೊರವಂಜಿಯಾಗಿ ಬರುವುದು. ಸತ್ಯಭಾಮಾ ತಪಸ್ಸು ಮಾಡಿ ದೇವತೆಯನ್ನು ಪ್ರಸನ್ನ ಮಾಡಿಕೊಳ್ಳುವುದು. ಆನಂತರ ನರಕಾಸುರ ವಧೆ, ಪಾರಿಜಾತಾಪಹರಣ, ಇಂದ್ರ–ಉಪೇಂದ್ರರಲ್ಲಿ ಯುದ್ಧ ದಿವಿಜತರು ಸತ್ಯಭಾಮೆಯ ಮನೆಗೆ ಬಂದಕೂಡಲೇ ಸವತಿಯ ಜಗಳ. ಕೊನೆಗೆ ರುಕ್ಮಿಣಿಯ ತೀರ್ಪು ತೆಲಗು ಪಾರಿಜಾತದಲ್ಲಿ ಕಂಡು ಬರುತ್ತವೆ. "ಕನ್ನಡ ಶ್ರೀಕೃಷ್ಣ ಪಾರಿಜಾತದಲ್ಲಿ ಸರಸ್ವತಿ ಬದಲಾಗಿ ಶ್ರೀಕೃಷ್ಣನೇ ಕೊರವಂಜಿಯಾಗಿ ಬರುತ್ತಾನೆ".

ಶ್ರೀಕೃಷ್ಣ ಕೊರವಂಜಿ ರೂಪ ಧಾರಣ ಮಾಡಿದ ಮೇಲೆ ಕೇಳಬೇಕೆ! ಅವನು ವಿಶ್ವರೂಪಿ. ಸರ್ವಜ್ಞ, ಲೋಕಜ್ಞಾನ ಬಲ್ಲವನು. ಈ ಪ್ರಕೃತಿಯ ನಿಯಮಗಳು ತಿಳಿಸಿಕೊಡಬಲ್ಲವನು ಆಗಿದ್ದಾನೆ. ಆದ್ದರಿಂದ ಕೊರವಂಜಿ ಪಾತ್ರವು ಲೋಕಕ್ಕೆ ಜ್ಞಾನದ ಪಾಠ ಹೇಳಿಕೊಡುವುದ್ದಾಗಿದೆ. ಮಾನವ ತನ್ನ ದಿವ್ಯಗುಣಗಳಿಂದ ನಡೆದು ದೇವನಾಗಬಹುದು. ತನ್ನ ನಾಟಕೀಯ (ಕೆಟ್ಟ) ಗುಣಗಳಿಂದ ಪತಿತನಾಗಿ ದನುಜನಾಗಬಹುದು. ದೇವನೂ ತನ್ನ ಅಹಂಕಾರ, ವಿಕಾರ ಲೋಲುಪತೆಗಳಿಂದ ದುರ್ಬಲನಾಗಿ, ಮಾನವನ ಮೊರೆಹೊಕ್ಕು 'ದೇವತ್ವದ' ಗೌರವನ್ನು ಕಾಪಾಡಿಕೊಳ್ಳಬೇಕಾಗುತ್ತದೆ. ದೇವ–ಮಾನ–ದಾನವರಲ್ಲಿ ಮಾನವನು ಶ್ರೇಷ್ಠ ಸ್ಥಾನದಲ್ಲಿದ್ದಾನೆ. ಅಹಂಕಾರವೇ ಅಧಃಪತನದ ಮೂಲ. ಸರ್ವ ಸಮರ್ಪಣೆಯೇ ಭಕ್ತಿಯ ಆಧಾರ. ಪರಮಾತ್ಮನು ನಿರ್ಮಲ ಹೃದಯಕ್ಕೆ ವಶವಾಗುವನು. ದುಷ್ಟರ ದಮನವೂ, ಶಿಷ್ಟರ ರಕ್ಷಣೆಯೂ ಅವನ ಸ್ವಭಾವವಾಗಿದೆ. ಇವೆಲ್ಲ ವಿಷಯಗಳು ಪರೋಕ್ಷವಾಗಿ ಮನ–ಮುಟ್ಟುವಂತೆ ಕೊರವಂಜಿ ಪಾತ್ರದಲ್ಲಿ ಧ್ವನಿತವಾಗಿದೆ.

ಶ್ರೀಕೃಷ್ಣ ಪಾರಿಜಾತದಲ್ಲಿ ಕೊನೆಯ ಪ್ರವೇಶದಲ್ಲಿ ಬರುವ ಪಾತ್ರ ಕೊರವಂಜಿ. ಕೊನೆಯಲ್ಲಿ ಬಂದರು ಇವಳ ವೇಷಭೂಷಣ ಹಾಗೂ ಮಾತಿನ ಗತ್ತುಗಾರಿಕೆಯು ಹಾಸ್ಯರಸದ ಹೊನಲೆ ಇದ್ದಂತೆ. "ಗಂಡರೆನಗಿಲ್ಲ ಹೆಂಡಿರನಾಳುವೆ" ಅಲ್ಲದೇ ಭಾಮೆಯನ್ನು ಕುರಿತು 'ದುಂಡಿ ನಿನ್ನಗಂಡ ಚಂಡ ಪ್ರಚಂಡ' ಹಾಗೇಯೇ ಲೋಕಜ್ಞಾನದ ವಿಚಾರಗಳು, ಅಧ್ಯಾತ್ಮಕ ವಿಷಯಗಳು, ಸರಳವಗಿ ಆಡು ಭಾಷೆಯಲ್ಲಿರುವುದರಿಂದ ಪ್ರೇಕ್ಷಕ ವರ್ಗವು ಹಾಸ್ಯದಿಂದ ಅಧ್ಯಾತ್ಮದವರೆಗೆ ಏನೆಲ್ಲಾ ತಿಳಿದುಕೊಳ್ಳಬಹುದಾಗಿದೆ.

ಪ್ರಸ್ತುತ ಸಂಪ್ರಬಂಧದಲ್ಲಿ ಕೊರವಂಜಿಯ ಪಾತ್ರದ ಮೂಲಕ ಲೋಕವನ್ನು ಸುಸ್ಥಿತಿಯಲ್ಲಿರಲು ಸಾಧನಗಳಾವವು ಎಂಬ ಲೋಕನೀತಿಯೇ ನಾಟಕದ ಪ್ರಮುಖ ಉದ್ದೇಶವಾಗಿದೆ. ಅಹಂಕಾರದ ದುಷ್ಪರಿಣಾಮ. ಸವತಿಯ ಮತ್ಸರದ ಹಗರಣ ಇವುಗಳನ್ನು ಹಳ್ಳಿಯ ಜನರಲ್ಲಿ ಬಿಂಬಿಸುವದೇ ಕೊರವಂಜಿಯ ಪ್ರಮುಖ ಉದ್ದೇಶ. ಅದು ಶ್ರೀಕೃಷ್ಣ ಪಾರಿಜಾತದಲ್ಲಿ ಸಫಲವಾಗಿದೆ. ಭಕ್ತಿ, ದೇವರಲ್ಲಿ

ಅನನ್ಯ ಶ್ರದ್ಧೆ. ನಮ್ಮ ಎಲ್ಲ ದುಃಖಗಳನ್ನು ದೂರಮಾಡಿ ಸುಖದ ಸುಪ್ಪತ್ತಿಗೆಯಲ್ಲಿ ಇರುವೆವು ಎಂಬ ವಿಶ್ವಾಸ ಜನರಲ್ಲಿ ಹುಟ್ಟಿಕೊಳ್ಳುತ್ತದೆ.

ಶ್ರೀಕೃಷ್ಣ ಪಾರಿಜಾತಕ್ಕೆ ಮೂಲ ಪ್ರೇರಣೆ ತೆಲಗಿನ ಯಕ್ಷಗಾನ ಮತ್ತು ಕೂಚಿಪುಡಿಗಳು ಎಂಬುದನ್ನು ಸ್ಪಷ್ಟೀಕರಿಸಲಾಗಿದೆ. ಇದಕ್ಕೆ ಸ್ಪಷ್ಟ ನಿದರ್ಶನವೆಂದರೆ 'ಪಾರಿಜಾತದಲ್ಲಿ ಬರುವ ಕೊನೆಯ ಸನ್ನಿವೇಷದ ಪಾತ್ರ ಕೊರವಂಜಿ' ಈ ಪಾತ್ರದ ಮೂಲಕ ಜನಸಾಮಾನ್ಯರ ಜೀವನ ಅವನು ಬದುಕುವ ರೀತಿ ನೀತಿಗಳು ತಿಳಿಯುವಂತಾಗಿದೆ. ಈ ರಂಗಕಲೆಯು ತೋಂಡಿ ಸಂಪ್ರದಾಯದಿಂದ ಹರಿದು ಬಂದರು, ಇದಕ್ಕೆ ತನ್ನದೇ ಆದ ಪೌರಾಣಿಕ ಕಥಾ ವಸ್ತುವಿನ ನೆಲೆಯಲ್ಲಿ ನಡೆದುಕೊಂಡು ಬರುತ್ತದೆ.

# : ಗ್ರಂಥಋಣ :


೧) ಶ್ರೀಕೃಷ್ಣ ಪಾರಿಜಾತ ಒಂದು ಅಧ್ಯಯನ : ಡಾ॥ ಶ್ರೀರಾಮ ಇಟ್ಟಣ್ಣನವರ

೨) ಅಪರಾಳ ತಮ್ಮಣ್ಣನವರ ಕೃತಿ : ಶ್ರೀಕೃಷ್ಣ ಪಾರಿಜಾತ : ಸಂ. ಆರ್. ಜಿ. ಕುಲಕರ್ಣಿ

೩) ಭಾರತೀಯ ರಂಗಭೂಮಿ : ಆದ್ಯರಂಗಾಚಾರ್ಯ

೪) ಸಂಶೋಧನ ಗ್ರಂಥಮಾಲೆ ೪೪ : ಡಾ॥ ಬಸವರಾಜ ಮಲಶೆಟ್ಟಿ

೫) ಕನ್ನಡದ ಸಣ್ಣಾಟಗಳು : ಡಾ॥ ನಿಂಗಣ್ಣ ಸಣ್ಣಕ್ಕಿ

೬) ಶ್ರೀಕೃಷ್ಣ ಪಾರಿಜಾತ (ಬಯಲಾಟ) : ಡಾ॥ ಎಂ. ಎಸ್. ಸುಂಕಾಪೂರ

೭) ಕನ್ನಡ ಜಾನಪದ ಸಾಹಿತ್ಯ : ಡಾ॥ ಬೆಟಗೇರಿ ಕೃಷ್ಣಶರ್ಮಾ

೮) ಜಾನಪದ ಸ್ವರೂಪ : ಡಾ॥ ದೆ. ಜೆ. ಗೌ

೯) ಜಾನಪದ ಸಾಹಿತ್ಯ ದರ್ಶನ ೨ : ಕ. ವಿ. ಧಾರವಾಡ

೧೦) ರಾಧಾನಟ : ಡಾ॥ ಮಲ್ಲಿಕಾಜುನ ಲಠ್ಠೆ

೧೧) ಕನ್ನಡ ಜಾನಪದ ಗೀತೆಗಳು – ಡಾ॥ ಬಿ. ಎಸ್. ಗದ್ದಿಗಿಮಠ

೧೨) ವಿಜಾಪುರ ಜಿಲ್ಲೆಯ ಜನಪದ ಕಲೆ ಕಲಾವಿದರು – ಡಾ॥ ಎಂ. ಎನ್. ವಾಲಿ

೧೩) ಜನಪದ ರಂಗಕಲಾವಿದ 'ಅಪ್ಪಾಲಾಲ' – ಡಾ॥ ಕಾಳಿಂಗ ಡಿ. ಗೊಳಸಂಗಿ

೧೪) ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು – ಡಾ॥ ಜೀ. ಶಂ. ಪರಮಶಿವಯ್ಯ

೧೫) ಕರ್ನಾಟಕ ಜನಪದ ಕಲೆಗಳು – ಗೊ. ರು. ಚನ್ನಬಸಪ್ಪ



ಶ್ರೀ ಮಲ್ಲಯ್ಯಾಸ್ವಾಮಿ ಅಥಣಿ 'ಕೊರವಂಜಿ' ಪಾತ್ರದಲ್ಲಿ